# ಕರಿಯ ಕಂಬಳಿ

## ಮತ್ತು ಇತರ ಕತೆಗಳು

ಜಿ. ಪಿ. ರಾಜರತ್ನಂ.



ಪ್ರಕಾಶಕರು:

ಆನಂದ್ ಬ್ರದರ್ಸ್

ಬೆಂಗಳೂರು-೨.

# ಅರಿಕೆ

ಈ ಪುಸ್ತಕದ ಹದಿಮೂರು ಕಥೆಗಳಲ್ಲಿ ಮೊದಲಿನ ಏಳು ನನ್ನ ಸ್ವಂತ. ಎಂಟನೆಯದು, ಒಂಬತ್ತನೆಯದು ಎರಡೂ ಎರಡು ರಷ್ಯನ್ ಕತೆಗಳ ರೂಪಾಂತರ. ಕಡೆಯ ನಾಲ್ಕು, ಫ್ರಾನ್ಸ್ ದೇಶದ ಮಹಾ ವಿಡಂಬನಕಥಾಸಾಹಿತಿಯೂ ರಾಜಕಾರಣಿಯೂ ಆದ ವಾಲ್ಟೇರ್ ಕವಿಯ ನಾಲ್ಕು ಕಥೆಗಳ ಅನುವಾದ.

ಈ ಸಂಕಲನ ಕನ್ನಡಿಗರಿಗೆ ರುಚಿಯಾಗಲಿ.

ರಾಜರತ್ನಂ.

# ವಿವರ


೧. ಕರಿಯ ಕಂಬಳಿ .... .... .... .... ೫

೨. ಬೆಳುದಿಂಗಳು .... .... .... .... ೯

೩. ವಸೂಲಿ .... .... .... .... ೨೩

೪. ಒಲವೋ? ಕುಲವೋ? .... .... .... ೩೪

೫. ಕೆಸರಿನ ಕಮಲ .... .... .... .... ೪೨

೬. ಅನಿಷ್ಟಕ್ಕೆ ಶನೀಶ್ವರ ಗುರಿ .... .... .... ೫೧

೭. ೨೪—೨—೩೦ .... .... .... .... ೫೬

೮. ಮೂಲವೆಲ್ಲಕ್ಕು ಮನಸು .... .... .... ೬೫

೯. ಅವಳ ಗಂಡ .... .... .... .... ೬೯

೧೦. ಮೂಮಣ್ಣ .... .... .... .... ೭೯

೧೧. ಕುಷಿಸಂಕಟ .... ... .... .... ೮೯

೧೨. ಕಪ್ಪಾದದ್ದೂ ಬಿಳುಪಾದದ್ದೂ .... .... .... ೯೮

೧೩. ಬಬೂಕನ ಕಣಸು .... .... .... .... ೧೨೧

# ಕರಿಯ ಕಂಬಳಿ

---

ಮಳೆ ಎಂದರೆ ಅಂಥ ಇಂಥ ಮಳೆಯಲ್ಲ. ಕೈ ಹೊರುವುದನ್ನು ಮೈ ಹೊರಲಿ ಎಂದು ಎಲ್ಲಾ ಬಟ್ಟೆಬರೆಗಳನ್ನೂ ಮೈ ಮೇಲೆಯೇ ಹಾಕಿಕೊಂಡಿದ್ದೆ. ಹಿಡಿದುಕೊಂಡಿದ್ದ ಛತ್ರಿ, ಹೊದ್ದಿದ್ದ ಜಮಖಾನೆ, ಉಟ್ಟಿದ್ದ ಎರಡು ಖಾದಿ ಪಂಚೆ, ತೊಟ್ಟಿದ್ದ ಕಾಕಿ ಚೆಡ್ಡಿ, ಇಷ್ಟೆಲ್ಲಾ ನೆನೆದದ್ದಲ್ಲದೆ, ಕಟ್ಟಿದ್ದ ಕಾಚ ಕೂಡ ಒದ್ದೆ ಮುದ್ದೆಯಾಗಿತ್ತು ಎಂದರೆ— ಮಳೆಯ ಹೊಡೆತ ಎಷ್ಟಿರಬೇಕು !

ಹೀಗೆ ಮಳೆ ಬರುತ್ತದೆ ಎಂದು ತಿಳಿದಿದ್ದರೆ, ನಾನು ಮನೆ ಬಿಟ್ಟು ಹೊರಡುತ್ತಲೇ ಇರಲಿಲ್ಲ. ಕನ್ನಂಬಾಡಿಯಲ್ಲಿ ಪ್ರವಾಹ ನೋಡಲು ಹೋಗಿದ್ದವನು, ಬರುವಾಗ ಆ ಶನಿಮಳೆಯಲ್ಲಿ ಸಿಕ್ಕಿಹೋಗಿ, ಬಹಳ ಅವಸ್ಥೆಪಟ್ಟುಹೋಗಿಬಿಟ್ಟೆ. ಇನ್ನೊಂದು ಒಂದು ಫರ್ಲಾಂಗು ಕಳೆದರೆ, ಬಳಗೊಳ ಸ್ಟೇಷನ್ನು ಸಿಕ್ಕಬೇಕು ; ಬೇಗ ಬೇಗ ಬರುತ್ತಿದ್ದೆ.

ಪಕ್ಕದಲ್ಲಿ "ನನ್ನೊಡೆಯಾ !" ಎಂದ ಹಾಗಾಯಿತು.

ತಿರುಗಿ ನೋಡಿದೆ.

ಬದಿಯಲ್ಲಿ ಒಂದು ಮೋರಿ....ಅದರ ತುಂಬ ತುಂಬಿ ಮೇಲೆ ಹರಿಯುತ್ತಿದೆ ನೀರು....ಕನ್ನಂಬಾಡಿಯ ಪ್ರವಾಹದಂತೆಯೇ ಜೋರಾಗಿ... ಅದರ ಬಳಿ ರಸ್ತೆಯ ಪಕ್ಕದಲ್ಲಿ ಹಳ್ಳಿಯವನೊಬ್ಬ ...ಕಟ್ಟಿದ್ದ ಲಂಗೋಟಿ ವಿನಾ ತೀರ ಬೆತ್ತಲೆ. ನಡುನಡುಗುತ್ತ, ಕುಗ್ಗಿದ ದನಿಯಿಂದ 'ಬುದ್ದೀ !' ಎಂದ.

"ಏನಯ್ಯಾ ?"

"ಬುದ್ದೀ ! ಕನ್ನಂಬಾಡಿಯಲ್ಲಿ ನೀರು ನೋಡುವ ಅಂತ ಬೊಗ್ಗಿದೆ ಬುದ್ದಿ....ಹೊದ್ದಿದ್ದ ಕರೀಕಂಬ್ಳಿ ಕೊಚ್ಕೊಂಡ್ ಹೋಯಿತ್ರ ಬುದ್ದೀ.... ಛಳಿ ಆಯ್ತದೆ. ಟೇಸನ್ಗೆ ಹೋಗುವ ಅಂದರೆ ನಾಚಿಕೆ ಆಯ್ತದೆ....ಊರು ಸೇರಬೇಕಲ್ಲಾ ಬುದ್ಧೀ ..."

"ಅದಕ್ಕೆ ನಾನು ಏನು ಮಾಡಬೇಕಯ್ಯಾ? ಕನ್ನಂಬಾಡಿಯಲ್ಲಿ ಕರಿಯ ಕಂಬಳಿ ಕಳೆದುಕೊಂಡು, ಬಳಗೊಳದಲ್ಲಿ ಬಾಯಿಬಡಿದುಕೊಂಡರೆ ಏನಾದ ಹಾಗಾಯಿತು?"

ಆ ಹಳ್ಳಿಯವನು ನನ್ನ ಜಮಖಾನೆಯ ಕಡೆ ನೋಡಿ, "ಏನೋ ಬುದ್ದಿಯವರು ಯಿರಿಮನಸು ಮಾಡಿದರೆ—" ಅಂದ.

ಜಮಖಾನೆ ನೋಡಿದೆ. ಮಳೆಯಲ್ಲಿ ನೆನೆದು, ಆ ಕೆಂಪುಬಣ್ಣ, ಹಸುರುಬಣ್ಣ ಚೆನ್ನಾಗಿ ಎದ್ದು ಕಾಣುತ್ತಿತ್ತು. ಏಕೋ, ಕೊಡುವುದಕ್ಕೆ ಮನಸ್ಸು ಬರಲಿಲ್ಲ. ಆದರೂ "ಪಾಪ! ಇವನು ಬರೀ ಬೆತ್ತಲೆ ಇದಾನಲ್ಲ!" ಎಂದು ಉಟ್ಟಿದ್ದ ಎರಡು ಖಾದಿ ಪಂಚೆಗಳಲ್ಲಿ ಒಂದನ್ನು ಬಿಚ್ಚಿ ಕೊಟ್ಟೆ. ಆ ಹಳ್ಳಿಯವನ ಸಂತೋಷ, ಅವನು ನನಗೆ ಅಡ್ಡಬಿದ್ದದ್ದು, ಇವುಗಳನ್ನು ಹೇಳತೀರದು.

"ಬಾರಯ್ಯ ಸ್ಟೇಷನ್ನಿಗೆ; ಊರಿಗೆ ಬೇಕಾದರೆ ಕಳುಹಿಸಿಕೊಡುತೇನೆ. ಮೈಸೂರೇನಯ್ಯಾ?" ಎಂದೆ.

ಅವನು ನಮಸ್ಕರಿಸುತ್ತಾ "ಔದು ಬುದ್ದೀ....ಕ್ಷಮಿಸಿ ಬುದ್ದೀ.... ಅರಕ್ಷಣದಾಗೆ ಬಂದುಬುಡ್ತೀನಿ, ಬುದ್ದೀ" ಎಂದು ಹೇಳಿ ಹೊರಟ; ಪೊದೆಯ ಮರೆಗೆ.

ಮಳೆ ನಿಂತಿತು. ನನಗೂ ನಡೆದು ಸಾಕಾಗಿತ್ತು. ರೈಲು ಬರಲು ಇನ್ನೂ ಕಾಲವಿದ್ದುದರಿಂದ, ರಸ್ತೆಯ ಪಕ್ಕದ ದೊಡ್ಡ ಅರೆ ಬಂಡೆಯ ಮೇಲೆ ಕುಳಿತು, ಹಳ್ಳಿಯವನೂ ಬರಲೆಂದು ಕಾದಿದ್ದೆ.

ಸ್ವಲ್ಪ ಹೊತ್ತಾದ ಮೇಲೆ, ಅದೇ ಹಳ್ಳಿಯವನು, ಯಾವುದೋ ಲಾವಣಿ ಹಾಡುತ್ತಾ ಕನ್ನಂಬಾಡಿಯ ಕಡೆಗೆ ಹೊರಟ. ನಾನು ಸ್ಟೇಷನ್ನಿಗೆ ಹೊರಟುಹೋದೆನೆಂದು ಅವನೆಣಿಸಿರಬೇಕು. ನೋಡಿದರೆ ...ನನ್ನ ಪಂಚೆ ಉಟ್ಟಿದ್ದಾನೆ! ಕರಿಯ ಕಂಬಳಿ ಹೊದ್ದಿದ್ದಾನೆ! ನನಗೆ ಏಕೋ ಬಹಳ ರೇಗಿತು.

"ಅಯ್ಯಾ! ಗೌಡ!!" ಎಂದು ಕೂಗಿದೆ.

ಅವನು ಹೋಗುತ್ತಿದ್ದ ಹಾಗೆಯೇ ನಿಂತು, ನನ್ನ ಕಡೆ ತಿರುಗಿ, "ಏನಪ್ರ, ನನ್ನೊಡಿಯಾ?" ಎಂದು ಕೈ ಜೋಡಿಸಿ ನಿಂತ. ನಗುತ್ತ ನಿಂತ!

ನನಗೆ ಕೋಪ ಹೆಚ್ಚಿತು. "ಏನಯ್ಯಾ? ಗೃಹಸ್ಥ! ಈ ರೀತಿ ಠಕ್ಕು ಹೊಡೆದು ಪಂಚೆ ಕಸಿಯಬೇಕೇನಯ್ಯಾ?.... ಇದಕ್ಕಿಂತ ಗತಿಯಿಲ್ಲ ಅಂತ ಕೇಳಿಕೊಳ್ಳಬಾರದೇ?" ಎಂದೆ.

"ನಾನು ಏನು ಯೇಳಲಿ ನನ್ನೊಡೆಯಾ! ತಾವು ನನಗೆ ಪಂಚೆ ಕೊಟ್ಟ ಮುವೂರ್ತ ಬಲೆ ಒಳ್ಳೇದು ಬುದ್ದಿ! ಪಂಚೆ ಉಟ್ಟು ಆಚೋರಿ ವೊಂಟ್ರೆ, ಕನ್ನಂಬಾಡೀಲಿ ಕಳಕೊಂಡ ಕರೀಕಂಬಳಿ ಈ ವೋರಿಲೇ ತೇಲ್ಕೊಂಡು ನನ್ತಾಕೇ ಬರಬೇಕಾ! ನಿಮ್ಮ ಆಸ್ತಗುಣ ಬಲೆ ಚೆಂದಾಗದೆ ಬುದ್ದೀ........!"

ಅವನ ಅರಳಿಸಿದ ಕಣ್ಣುಗಳನ್ನೂ, ಅಂಗಾಂಗ ವಿನ್ಯಾಸಗಳನ್ನೂ ನೋಡುತ್ತಿದ್ದರೆ, ನನಗೆ ಸುಮ್ಮನೆ ವ್ಯಥೆಯಾಗುತ್ತಿತ್ತು—ಈ ಹಳ್ಳಿ ಯುವನಿಗಿಂತ ಹಳ್ಳಿಗಮಾರನಾದೆನೇ ನಾನು, ಎಂದು.

ಅವನ ಕಡೆ ತಿರುಗಿ, "ಅಲ್ಲವಯ್ಯಾ! ಹಳ್ಳಿಯವರಿಗೆ ಹೇಳುವ ಹಾಗೆ ಹೇಳುತ್ತೀಯಲ್ಲ ಕತೇನ! ವೋರಿ ಹರಿಯುತ್ತಿರುವುದು ಕನ್ನಂಬಾಡಿ ಕಡೆಗೆ.... ನಿನ್ನ ಕಡೆಗೆ ಹೇಗಯ್ಯಾ ತೇಲಿಕೊಂಡು ಬರುತ್ತದೆ ಕಂಬಳಿ? ಹ್ಞಾ! ಅದೂ ಹೋಗಲಿ ಅಂದರೆ. ಕಂಬಳಿ ಕೊಂಚವಾದರೂ ನೆನೆದಿಲ್ಲ! ಏನಯ್ಯಾ! ಹ್ಞಾ!" ಎಂದು ಕೋಪದಿಂದ ಒದರಿದೆ.

ಅವನು ಬಹಳ ವಿನೀತನಾಗಿ, "ಎಲ್ಲಾ ನನ್ನೊಡೆಯ ಸಿವನ ಮಾಯೆ, ಬುದ್ದೀ! ಅಲ್ಲ, ನಾನು ಕಂಬಳಿ ವೋಯ್ತೂಂತ ಗೋಳಾಡು ತಿದ್ದರೆ, ವೋದ ಕಂಬಳಿ ವೋದಂಗೇನೇ ಸ್ವಲ್ಪಾನೂ ಒದ್ದೆಯಾಗದೆ ನನ್ನ ಅತ್ತಿರ ಬರಬೇಕು ಎಂದರೆ, ಅದು ಸಿವನ ಆಟಾನೇ ಬುದ್ದೀ! ಚಿಗಟನ ಕಣ್ಣೊಳಗೆ ಆನೆ ವೋಗಿ ಕುಂತರೂ ನಾವು ಆಸ್ಚರ್ಯಪಡಬೇಕಾಗಿಲ್ಲ, ಬುದ್ದೀ! ಅ ಸಿವ ಏನು ಬೇಕಾದರೂ ಮಾಡುತಾನೆ........ನನಗೆ ಗೊತ್ತು....!" ಎಂದು ನಿದಾನವಾಗಿ, ಕಣ್ಣುಗುಡ್ಡೆ ಮೇಲಕ್ಕೆತ್ತಿ, ಕೈ ಆಡಿಸುತ್ತಾ ಎನ್ನುತ್ತಿದ್ದರೆ, ನನಗೆ ಹೇಗೆ ಹೇಗೋ ಆಗುತ್ತಿತ್ತು.

ಏನಾದರೆ ತಾನೇ ಏನು?.... ಪಂಚೆ ಕೊಟ್ಟದ್ದಾಯಿತು.... ಆಳು ನನಗೆ ಮೂರು ಮೂರುವರೆಯಷ್ಟಿದ್ದಾನೆ... ಪಂಚೆ ಕೈ ತಪ್ಪಿ ಹೋದದ್ದು, ಅವನ ಮೈ ಮುಚ್ಚಿ ಬಂದರೆ, ಹೇಗೆ ನಾನು ಅದನ್ನು ಮತ್ತೆ ಉಡಲಿ?

ಇನ್ನು ಮಾತನಾಡಿ ಸುಖವಿಲ್ಲವೆಂದು, ವ್ಯಂಗ್ಯವಾಗಿ, "ಅಯ್ಯಾ! ನಿನಗೆ ಕಂಬಳಿ ಹಿಂದಕ್ಕೆ ಕೊಟ್ಟ ದೇವರಿಗೆ ಹಣ್ಣುಕಾಯಿ ಮಾಡಿಸು, ತೆಕೊ!" ಎಂದು ಒಂದು ಮೂರುಕಾಸಿನ ಬಿಲ್ಲೆಯನ್ನು ಅಸಡ್ಡೆಯಿಂದ ಅವನ ಕಡೆಗೆ ಎಸೆದೆ.

ಬೆಳ್ಳಿ ಹೊಳೆದ ಹಾಗಾಯಿತು! ನಾನು ನೋಡದೆ ಮೂರು ಕಾಸೆಂದು ಎಸೆದದ್ದು ಎಂಟಾಣೆ ನಾಣ್ಯ!

ಆ ಹಳ್ಳಿಯವನು "ನಿಮ್ಮ ಪಾದಕ್ಕೆ ಅಡ್ಡಬಿದ್ದೆ ಬುದ್ದೀ! ನನ್ನ ಮಕ್ಕಳಿಗೂ ನನಗೂ ಮೂರು ದಿನದ ಯಿಟ್ಟು ಸಿಕ್ತು. ನಿಮ್ಮ ಯೆಂಡರು ಮಕ್ಕಳು ತಣ್ಣಗಿರಲಿ, ಬುದ್ದಿ. ನಾನು ಬತ್ತೀನಿ ನನ್ನೊಡೆಯಾ." ಎಂದು ಹೇಳುತ್ತಾ ಕನ್ನಂಬಾಡಿಯ ಕಡೆ ಹೊರಟ.

ನಾನು "ಸಧ್ಯ ನಾನು ಬೆಚ್ಚಗೆ ಆದರೆ ಸಾಕು" ಎಂದುಕೊಳ್ಳುತ್ತಾ, ಒದ್ದೆ ಜಮಖಾನೆಯನ್ನು ಗಟ್ಟಿಯಾಗಿ ಮುದುರಿಕೊಂಡು ಸ್ಟೇಷನ್ನಿಗೆ ಬಂದೆ. ರೈಲೂ ಬಂತು. ರೈಲಿನಲ್ಲಿ ಕುಳಿತು ನಡೆದದ್ದನ್ನೆಲ್ಲಾ ಯೋಚಿಸಿದೆ.

ಹಳ್ಳಿಯವನಿಗೆ ಈ ಚರ್ಯೆಯೋ ಏನಾದರೂ ಕಸುಬೆ?....ಅಥವಾ ಈ ದಿನ ಮಾತ್ರ ಹೊಟ್ಟೆಗಾಗಿ ಹೀಗೆ ಮಾಡಿದನೆ?....ನಾನು ಮೂರು ಕಾಸೆಂದು ಎಸೆದದ್ದು ಎಂಟಾಣೆಯಾದದ್ದೇಕೆ?....ಆ ಹಳ್ಳಿಯವನೆಂದಂತೆ, ಈಗಾದುದೆಲ್ಲವೂ ಭಗವಂತನ ಲೀಲೆಯೋ?....

# ಬೆಳುದಿಂಗಳು

— ೧ —

ಬೆಂಗಳೂರು ಬಿಟ್ಟು, ಮೈಸೂರಿಗೆ ಬರುವ ಏಳು ಗಂಟೆ ರೈಲಿನಲ್ಲಿ ಶಾಮಿ ಕುಳಿತದ್ದಾಯಿತು. ಆದರೆ, ರಂಗಯ್ಯ ತನ್ನನ್ನೇಕೆ ಮೈಸೂರಿಗೆ ಬರಹೇಳಿದನೆಂಬುದು ಮಾತ್ರ ಅವನಿಗೆ ಸರಿಯಾಗಿ ಗೊತ್ತಾಗಲಿಲ್ಲ. ರಂಗಯ್ಯನ ಕಾಗದವನ್ನು ರೈಲಿನಲ್ಲಿ ತಿರುಗಿಸಿ ತಿರುಗಿಸಿ ನೋಡಿದ.

"ಏನು! ಮನೆಯಲ್ಲಿ ಒಂದು ಹೆಣ್ಣುಮಗುವಿಗೆ ಹುಟ್ಟಿದ ಹಬ್ಬ, ಎಂದು ತನಗೆ—ಬೆಂಗಳೂರಿನಲ್ಲಿರುವವನಿಗೆ—ಔತನವೆ? ಇದಕ್ಕೋಸ್ಕರ ತಾನು ಬೆಂಗಳೂರಿನಿಂದ ಮೈಸೂರಿಗೆ ಹೋಗುವುದೆ! ಛೆ! ಛೆ! ಛೆ! ಈ ಯೋಚನೆ ಮೊದಲೇ ತೋರಲಿಲ್ಲವಲ್ಲಾ! ಈಗ ತಾನೆ ಏನು? ಮೈಸೂರಿಗೆ ಹೋಗುವುದಕ್ಕೆ ಬದಲಾಗಿ ಕೆಂಗೇರಿಯಲ್ಲಿ ಇಳಿದು—ಬೆಂಗಳೂರಿನಿಂದ ಏಳೇ ಏಳು ಮೈಲಿ—ಬೆಂಗಳೂರಿಗೆ ವಾಪಸ್ಸು ನಡೆದು ಹೋದರಾಯಿತು" ಎಂದು ನಿರ್ಧರಮಾಡಿ, ಕೆಂಗೇರಿ ಬಂದೊಡನೆಯೇ ಶಾಮಿ ಕೆಳಗಿಳಿದು ಹೊರಟ.

ಒತ್ತುವ ಕರಡಿನ ಮೇಲೆ ಗೆರೆಗಳು, ಅಕ್ಷರಗಳು, ಅಂಕಿಗಳು ಒಂದರ ಮೇಲೊಂದು ಬೀಳುವಹಾಗೆ, ಆಲೋಚನಾಪರಂಪರೆ ಮಿಂಚಿಗೆ ಮಿಗಿಲಾದ ವೇಗದಿಂದ ಶಾಮಿಯ ಮನಸ್ಸಿನಲ್ಲಿ ಹರಿಯತೊಡಗಿತು.

"ಅರೆ! ದುಡ್ಡುಕೊಟ್ಟೂ ಇಲ್ಲಿಂದ ಬೆಂಗಳೂರಿಗೆ ನಡೆದು ಹೋಗುವುದೇ? ಕೊಟ್ಟಿರುವ ರೂಪಾಯಿ ಹನ್ನೆರಡಾಣೆ ಒಂಬತ್ತು ಕಾಸಿಗಾದರೂ ಮೈಸೂರಿಗೆ ಹೋಗಲೇಬೇಕು. ಅಲ್ಲದೆ, ರಂಗಯ್ಯನ್ನ ಕಂಡು ಎರಡು ವರ್ಷದ ಮೇಲಾಯಿತು. ಅಂತಹ ಸ್ನೇಹಿತ ಬರಹೇಳಿರುವಾಗ ಹೋಗದಿರುವುದುಂಟೆ! ಆದರಲ್ಲೂ ಟಿಕೇಟು ತೆಗೆದುಕೊಂಡ ಮೇಲೆ! ಇದರ ಮೇಲೆಯೋ, ಮೈಸೂರಿಗೆ ಹೋದರೆ ಏನು ನಷ್ಟ? ಪಟ್ಟಾಗಿ ತಿಂಡಿ ಬೀಳುತ್ತೆ. ಸಾಲದ್ದಕ್ಕೆ ಮೈಸೂರಿನ ದೊಡ್ಡ ಕೆರೆಯ ಕಚಡಾ ನೀರೆಲ್ಲಾ ತೆಗೆಯುತ್ತಿದ್ದಾರಂತೆ, ಕೊನೆಗೂ! ಅದನ್ನು ನೋಡಲೇಬೇಕು.

ಅದೇನು ಸಾಮಾನ್ಯವಾದದ್ದೇ! ಭಗೀರಥ ಪ್ರಯತ್ನ...." ಇತ್ಯಾದಿ, ಇತ್ಯಾದಿ.,

ಪುನಃ ರೈಲಿನಲ್ಲಿ ಬಂದು ಕುಳಿತ. ರೈಲು ಸಾಗಿತು.

ಹಿಂದೆ ನಮ್ಮ ಪೂರ್ವಿಕರು ಪಂಚಾಗ್ನಿಮಧ್ಯದಲ್ಲಿ ಕುಳಿತು, ಏಕಾಗ್ರಚಿತ್ತದಿಂದ ಭಗವಂತನನ್ನು ಧ್ಯಾನಮಾಡುತ್ತಿದ್ದರಂತೆ. ಶಾಮಿಯೂ ಹಾಗೇ ಸುತ್ತಿನವರ ತಂಬಾಕಿನ ಹೊಗೆಯಿಂದಾವೃತನಾಗಿ, ತನ್ನ ಆಹ್ವಾನಕ್ಕೆ ನಿಜವಾದ ಕಾರಣವನ್ನು ಹುಡುಕಲು ಯತ್ನಿಸುತ್ತಿದ್ದ.

"ಒಂದು ಹೆಣ್ಣು ಮಗು ಹುಟ್ಟಿತು ಎಂದು ದೂರದೇಶದ ಇಷ್ಟಮಿತ್ರರನ್ನು ಔತನಕ್ಕೆ ಕರೆಯುತ್ತಾರೆಯೇ? ಅದರಲ್ಲೂ ೧೯೩೯ನೇ ಇಸ್ವಿಯಲ್ಲಿ? ಈ ನಾಜೋಕಿನ ಕಾಲದಲ್ಲಿ!.... 'ಏನೋ ಹೋಗಲಿ' ಅನ್ನುವುದಕ್ಕೆ, ಏನು ಅದು ಗಂಡು ಮಗುವೇ? 'ವಂಶೋದ್ಧಾರಕ, ಅಪ್ಪ ಅಮ್ಮಂದಿರಿಗೆ ಅವರೆಂದೂ ಕಾಣದಿರುವ ಗತಿ ತೋರಿಸುತ್ತಾನೆ' ಎನ್ನುವುದಕ್ಕೆ! ಹೆಣ್ಣು! ಸರ್ವಸಾಧಾರಣದ ಹೆಣ್ಣು! . ಇರಲಾರದು. ಇನ್ನೇನೊ ಇರಬೇಕು ಕಾರಣ ...ಲಕ್ಷ್ಮೀಶ ಹೇಳಿಲ್ಲವೆ; 'ಕ್ರೂರನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ನಿರ್ಮಲ ಜಲಬೊಳಿಸೆವಂತೆ'....ಏನೋ ಇದೆ ಒಳಗೆ!....ಏನದು?....ಯಾವ ನೀರಿನಲ್ಲಿ ಯಾವ ಮೊಸಳೆಯೋ!"

ಅವನ ಮೆದುಳಿನಂಬುಧಿಯ ಮಥನಕ್ಕಾರಂಭವಾಯ್ತು.

ಆ ಮಥನದಲ್ಲಿ ಏನೇನೋ ಉತ್ಕೃಷ್ಟ ನಿಕೃಷ್ಟ ವಸ್ತುಗಳು ಉತ್ಪತ್ತಿಯಾಗಿ, ಹೇಗೆ ಹೇಗೋ ಖರ್ಚಾಯಿತು. ಕೊನೆಗೆ ಅಮೃತದಂತಹ ವಸ್ತುವೊಂದು ಉದ್ಭವಿಸಿದರೂ, ಆ ಕಾಲಕ್ಕೆ ಮಾತ್ರ ಅದನ್ನು ಅವನು ಹಾಲಾಹಲವೆಂದೇ ಎಣಿಸಿದ.

ಅದು ಏನೆಂದರೆ: ಹಿಂದೆ, ಅವನೂ ರಂಗಯ್ಯನೂ ಬೆಂಗಳೂರಿನಲ್ಲಿ ಓದುತ್ತಿದ್ದಾಗ ಶಾಮಿ ಅವನನ್ನು ಕೇಳಿದ್ದ: "ಲೋ! ನಿಮ್ಮ ಅಪ್ಪನಿಗೆ ೧೨೦ ರೂಪಾಯಿ ಸಂಬಳ ಬರುತ್ತೆ. ಇನ್ನೊಂದು ಹತ್ತುರೂಪಾಯಿ ಹೆಚ್ಚಾಗಿ ತರಿಸಿಕೊಳ್ಳಬಾರದೇನೋ?" ಎಂದು.

ಅದಕ್ಕೆ ರಂಗಯ್ಯ ಹೇಳಿದ್ದ: "ನಾನೊಬ್ಬನೇ ಆಗಿದ್ದರೆ ಸರಿ ಹೋಗುತ್ತಿತ್ತು. ಆದರೆ ನನಗೆ ಚಿಕ್ಕವರು ಇನ್ನೂ ಮೂವರು ಇಧಾರೆ

ಎಲ್ಲಾ ಹೆಣ್ಣು ಕಣೋ! ಎಲ್ಲಾ ಹೆಣ್ಣು! ನನ್ನ ಮೊದಲನೇ ತಂಗಿಗೆ ಇನ್ನು ಎರಡು ಮೂರು ವರ್ಷ ಕಳೆದರೆ ಕಟ್ಟಿಕೊಳ್ಳಬೇಕು ಕುಂಬಳ ಕಾಯಷ್ಟು ದಪ್ಪ ಥೈಲೀನ! ನಮ್ಮ ಸಮಾಜವೇ ಇಷ್ಟು ಕಣೋ!"

ಅದಕ್ಕೆ "ನಮ್ಮ ಸಮಾಜ ಅನ್ನು. ಅದು ಬೇರೆ ಒಂದು ಕೇಡು ನಮಗೆ! ಆದರೂ....ಹೌದು. 'ನಾವು' ಎಂದ ಮೇಲೆ, 'ನಮ್ಮದು' ಅಂತ ಇಲ್ಲದೆ ಇದ್ದರೆ ಆಗುತ್ತದೆಯೆ! ಹಾಕಿಕೊಳ್ಳುವ ಕೋಟು ಹರಕಲು ತೇಪೆ ಕೋಟಾಗಲಿ, ಒಳ್ಳೇ 'ನೇವಿಬ್ಲೂ' ಹೊಸ ಕೋಟಾಗಲಿ, ಅದು 'ನಮ್ಮ' ಕೋಟು! ಹೌದು, 'ನಮ್ಮ' ಸಮಾಜ! ಇನ್ನೆಲ್ಲಿಯೂ ಇಲ್ಲ ದಿರುವ ವೈಪರೀತ್ಯಕ್ಕಾದರೂ 'ನಮ್ಮ ಸಮಾಜ' ಅನ್ನಬೇಕು" ಎಂದು ತಾನು ಹೇಳಿದ್ದು ನೆನಪಾಯಿತು.

"ಇದೇಕೆ ಇಷ್ಟು ಅರಚುತ್ತೀಯೊ? ಎಲ್ಲರ ಮನೆಯ ದೋಸೆಯೂ ತೂತೇ!" ಅಂದಿದ್ದ ರಂಗಯ್ಯ.

"ಆದರೆ ಎಲ್ಲರ ಮನೆಯ ಕಾವಲಿಯೂ ತೂತೇನು?" ಅಂದಿದ್ದ ತಾನು.

"ಲೋ! ದೋಸೆ ಹುಯಿದು ತಿನ್ನಬೇಕು ಅಂತ ಇಷ್ಟವಿದ್ದರೆ ತೂತು ಕಾವಲಿಯಲ್ಲೇ ಸರಿಮಾಡಿಕೊಳ್ಳಬೇಕು" ಅಂದಿದ್ದ ರಂಗಯ್ಯ.

"ಗೊತ್ತಾಯಿತು! ಇದಕ್ಕೇ 'ಮೈಸೂರಿಗೆ ಬಾ' ಎಂದದ್ದು! ನಿಜ ವಾಗಿಯೂ 'ಕ್ರೂರ ನಕ್ರಾಕುಲ'!....ಈಗ ಕೆಲಸ ಸಿಕ್ಕುವುದೇ ಕಷ್ಟ. ಸಿಕ್ಕಿದರೂ ನಮ್ಮ ಹೊಟ್ಟೆಗೇ ಸಾಲದು. ಅಮ್ಮನಿಗೆ ಧರ್ಮಾವರದ ಸೀರೆ ತೆಗೆಯಬೇಕು; ತಮ್ಮನಿಗೆ ಮುಂಜಿಯಾಗಬೇಕು; ಈ ಮಧ್ಯೆ ಅಪ್ಪನಿಗೆ ಷಷ್ಟಿಪೂರ್ತಿಶಾಂತಿ ಮಾಡಿಕೊಳ್ಳಲು ಆಸೆ. ಇಷ್ಟೆಲ್ಲ ರಾದ್ಧಾಂತ ದಲ್ಲಿ ಇದು ಯಾವುದೋ ಅವಾಂತರ ಕಟ್ಟಿಕೊಂಡು, ರೇಶಿಮ ಜಾಕೀ ಟಂತೆ, ಚಿನ್ನದ ಡಾಬಂತೆ, ವಜ್ರದೋಲೆಯಂತೆ; ಇದರಲ್ಲಿ ಯಾವುದಿಲ್ಲ ದಿದ್ದರೂ ಜಗಳ, ಕಪ್ಪುಮೋರೆ. ಯಾರಿಗೆ ಬೇಕು ಈ ಒದ್ದಾಟ! ಈ ಮದುವೆ ಇಲ್ಲದಿದ್ದರೆ ಉಳಿದುಹೋಯಿತು....ಏನೋ ಇಷ್ಟರ ಮೇಲೆ, ಹೊರಟಿದ್ದಂತೂ ಆಯಿತಲ್ಲ. ಹುಡುಗಿ ಸ್ವಲ್ಪ ಲಕ್ಷಣವಾಗಿ ಚೆನ್ನಾಗಿದು ....'ಅವಶ್ಯಮನುಭೋಕ್ತವ್ಯಂ'....ಭಗವಂತನ ಲೀಲೆ ಕಂಡವರಾರು...."

ಮದ್ದೂರು ಬಂತು. ಕಿಟಕಿಯ ಹತ್ತಿರ ಕಾಫಿಯೂ ಬಂತು. ಬಿಸಿಲಿನಲ್ಲಿ ಒಣಗಿದ ಭೂಮಿ, ಕೊಡದ ಮೇಲೆ ಕೊಡ ನೀರು ಹೀರುತ್ತೆ ಎನ್ನುವುದು ಸುಳ್ಳಲ್ಲ. ಸತ್ಯಾಸತ್ಯವು ಅನುಭವದ ಮೇಲೆ ಗೊತ್ತಾಗಬೇಕು! ಕಾಫಿ, ನಿದ್ರೆ ಕಡಿಮೆ ಮಾಡಿದರೂ ಜ್ಞಾಪಕಶಕ್ತಿ ಯೋಚನಾಶಕ್ತಿಗಳನ್ನು ಕಡಿಮೆ ಮಾಡದು.

"....'ಅವಶ್ಯಮನುಭೋಕ್ತವ್ಯಂ'? ಅದೆಲ್ಲಾ ದಾಸರ ಪದದಲ್ಲಿ! ಇದು ೧೯೪೯ನೇ ಇಸ್ವಿ! ನಾವು ಇಂಗ್ಲೀಷ್ ಓದಿದವರು! ನಮ್ಮ ಮುಂದೆ ಇದೆಲ್ಲಾ ನಡೆಯುವಂತಿಲ್ಲ. ಮನುಷ್ಯ ಮನಸ್ಸು ಮಾಡಿದರೆ ಏನು ತಾನೇ ಆಗುವುದಿಲ್ಲ! ನಾನೇನು ಎಳೆಯ ಮಗುವೇ? ಬೀಗದೆಸಳಿನಿಂದ ಹಲ್ಲುಬಿಡಿಸಿ ಔಷಧಿ ಶೀಷೆ ಬಗ್ಗಿಸುವುದಕ್ಕೆ! ...ಇರಲಿ, ನೋಡೋಣ ....ಹುಡುಗಿ ಚೆನ್ನಾಗಿದ್ದರೆ, ಏನೋ ಆ ಮನೆಯವರ ಕಷ್ಟ ನಿಷ್ಠುರ ನೋಡಿ, ಪಾಪ! ಯಾರಿಗಾದರೂ ತೊಂದರೆ ಇಲ್ಲದೆ ಇರುತ್ತದೆಯೆ, ಹ್ಞು! ಕಟ್ಟಿಕೊಳ್ಳುವುದು........ಮನುಷ್ಯ ಹುಟ್ಟಿರುವುದೇತಕ್ಕೆ — ಇನ್ನೊಬ್ಬರಿಗೆ ಸಹಾಯ ಮಾಡದಿದ್ದ ಮೇಲೆ?....ಛೆ! ಇದೇನಿದು? ಘಳಿಗೆಗೆ ಒಂದೊಂದು ಯೋಚಿಸುವುದಕ್ಕೆ ನಾನೇನು ಹೆಂಗಸು ಕೆಟ್ಟುಹೋದೆನೆ........ಇಷ್ಟೆಲ್ಲ ಯೋಚಿಸದೆ....ಹೆಣ್ಣು ಮಕ್ಕಳಿರೋ ಮಹನೀಯರು ಸುಮ್ಮಸುಮ್ಮನೆ ಗಂಡುಹುಡುಗರನ್ನು ಔತಣಕ್ಕೆ ಕರೆಯುತ್ತಾರೆಯೆ? ಇಲ್ಲ! ಮಡುವಿನಲ್ಲಿ ಮೊಸಳೆ ಇಧೆ! ಇರಲಿ! ನೋಡುವುದು. ಗಾಳಿ ಬೀಸಿದ ಹಾಗೆ ತೂರಿಕೊಳ್ಳುವುದು .. ಆದರೂ ನಮ್ಮ ಪ್ರಯತ್ನ ಮಾಡಿ ನೋಡಿಬಿಡುವುದು...."

ಉಯ್ಯಾಲೆ ಇನ್ನೂ ಮೇಲಕ್ಕೂ ಕೆಳಕ್ಕೂ ಆಡುತ್ತಿದ್ದ ಹಾಗೆಯೇ ರೈಲು ಮೈಸೂರಿಗೆ ಬಂತು. ರಂಗಯ್ಯ ಸ್ಟೇಷನ್ನಿಗೆ ಬಂದಿದ್ದ.

ಬೆಸ್ತರವನು ನಳ್ಳಿ ಹಿಡಿದರೆ 'ಲಟಲಟ' ಅಂತ ಅದರ ಕಾಲು ಮುರಿದು ಬುಟ್ಟಿಗೆ ಹಾಕಿಕೊಂಡು ಮನೆಗೆ ಒಯ್ಯುವಂತೆ, ರಂಗಯ್ಯ ಶಾಮಿಯನ್ನ ಕಂಡದ್ದೇ ತಡ—ಭುಜದ ಮೇಲೆ ಹೊಡೆದು, ಬೆನ್ನ ಮೇಲೆ ಗುದ್ದಿ, ಕೈ ಚೆನ್ನಾಗಿ ಹಿಸುಕಿ, 'ಬಡಬಡ' ಎಂದು ಮಾತಾಡಿ, ಎಳೆದು ಷಾಃಪಸಂದಿನಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಓಟ!

— ೨ —

ಮನೆಗೆ ಬಂದಮೇಲೆ ಯಥಾಕ್ರಮವಾಗಿ ಕಾಫಿ, ಸ್ನಾನ ಎಲ್ಲಾ ಆಯಿತು. ಅಡಿಗೆ ಇನ್ನೂ ಪೂರ್ತಿಯಾಗಿರಲಿಲ್ಲವಾದ್ದರಿಂದ, ಪಜಾರದಲ್ಲಿ ರಂಗಯ್ಯ, ಶಾಮಿ ಮಾತನಾಡುತ್ತಿದ್ದರು. ದೂರದಲ್ಲಿ ಪುಟ್ಟ ಹೆಣ್ಣು ಮಗುವೊಂದು— ಅದಕ್ಕೇ ಹುಟ್ಟಿದ ಹಬ್ಬ— ಆಟವಾಡುತ್ತಿತ್ತು.

ಮಾತಾಡುವುದಕ್ಕೆ ಇನ್ನೇನೂ ಇರಲಿಲ್ಲವಾದ್ದರಿಂದ "ಲೋ! ಕಾಫಿ ಎಂದರೆ—ಬೆಂಗಳೂರಿನಲ್ಲಿ...." ಎಂದ, ಶಾಮಿ.

"ಏಕೋ! ನಮ್ಮ ಮನೆ ಕಾಫಿ ಚೆನ್ನಾಗಿರಲಿಲ್ಲವೆ?"

"ಅದು ಕುಡಿದೇ ಮತ್ತೆ ಬೆಂಗಳೂರಿನ ಕಾಫಿ ನೆನಪಾದದ್ದು. ಕಾಫಿ ತಯಾರೀಲಿ ಬಹಳ ಪಳಗಿದ ಕೈ ಅಂತ ಕಾಣುತ್ತೆ. ನಿಮ್ಮ ಮನೆಯಲ್ಲಿ....ಯಾರು....ನಿಮ್ಮ ತಾಯಿ ಮಾಡಿದರೇನೊ?"

"ಅಮ್ಮ ಊರಲ್ಲಿಲ್ಲ; ಅಕ್ಕಯ್ಯನ ಊರಿಗೆ ಹೋಗಿದಾಳೆ. ನನ್ನ ತಂಗಿ ವಿಲಾಸಿ ಮಾಡಿದ್ದು."

"ಓ! ಹಾಗೇ!"

ಇದ್ದರೆ, ಇಂಥ ಹೆಂಡತಿ ಇರಬೇಕು ಎನ್ನಿಸಿತು, ಶಾಮಿಗೆ. ಸಾಯಂಕಾಲ ಆಫೀಸಿನಿಂದ ಆಯಾಸಪಟ್ಟು ಮನೆಗೆ ಬಂದರೆ, 'ಈಸಿ ಛೇರಿ'ನಲ್ಲಿ ಮಲಗಿಕೊಂಡು, ಎಡಗಡೆ ಮಂಡಿಯೂರಿ, ಹೆಂಡತಿ ಕಾಫಿ ಬಟ್ಟಲನ್ನು ಬಾಯ ಹತ್ತಿರ ತಂದರೆ, ಇಂತಹ ಕಾಫಿ ಕುಡಿದು, ಹಾ! ....ಆದರೆ ಈ ಹುಡುಗಿಗೆ ಮದುವೆ ಆಗಿದೆಯೊ ಏನೊ! ಇದುವರಿವಿಗೂ ಆ ಪ್ರಸ್ತಾಪ ಎತ್ತಿಲ್ಲ....ಒಂದು ವೇಳೆ ಕೇಳಿದರೆ, ಕಾಫಿ ಚೆನ್ನಾಗಿ ಮಾಡುತಾಳೆ ಎನ್ನುವುದಕ್ಕೋಸ್ಕರ....ಉಹ್ಞು! ಬೆಂಗಳೂರ ರಾಮಾಚಾರೀನೂ ಚೆನ್ನಾಗಿ ಮಾಡುತಾನೆ ಕಾಫೀನ...ಹಾಗಂತ ಅವನ್ನ....ಉಹುಂ....ಇಲ್ಲ! ಮದುವೆ ಆಗಿಹೋಗಿರಬೇಕು...

ಅಷ್ಟರಲ್ಲಿ ರಂಗಯ್ಯ, "ಏನು, ಬಹಳ ಯೋಚಿಸುತ್ತಿದ್ದೀಯೆ?" ಎಂದ.

ಶಾಮಿ ಆವಾಗ ಆದಷ್ಟು ಪೆಚ್ಚು ಇನ್ನು ಯಾವಾಗಲೂ ಆದ ಹಾಗೆ ಜ್ಞಾಪಕವಿಲ್ಲವಂತೆ. ಆದರೂ, ಆಕಡೆ ಈಕಡೆ ನೋಡಿ, "ನಿಮ್ಮ ತಾಯಿ

ಈ ಪುಟ್ಟಮಗೂನ ಇಲ್ಲೀ ಬಿಟ್ಟುಹೋದರಲ್ಲ ಅಂತ ಯೋಚಿಸುತಿದ್ದೆ" ಎಂದ.

ರಂಗಯ್ಯ ನಗುತ್ತಾ, "ಆ ಮಗು ನನ್ನ ತಂಗಿ ಅಂತಿದ್ದೀಯಾ?" ಎಂದು ಕೇಳಿದ.

"ಅಲ್ಲವೇನು!"

"ಅಯ್ಯೋ! ಪೆಚ್ಚ! ಅದು ನನ್ನ ಮಗು!"

"ನಿನ್ನ ಮಗು!"

ಆ ಮಗುವಿಗೆ ಅವರ ಮಾತು ಗೊತ್ತಾಯಿತೋ ಏನೋ, ಎಂಬಂತೆ ಅದು ಕೈ ಚಪ್ಪಾಳೆ ಇಕ್ಕಿ ನಗಲು ಮೊದಲುಮಾಡಿತು.

ಒಳಗಿನಿಂದ ಯಾರೋ "ಎಲೆ ಹಾಕಿದೆ, ಅಣ್ಣಯ್ಯ" ಎಂದರು. ಆ ಧ್ವನಿಯನ್ನು ಕೇಳಿದ, ಶಾಮಿ. ಏನೋ ಯೋಚಿಸುತ್ತಿದ್ದು, "ರಂಗೂ! ನಿಮ್ಮ ಮನೇಲಿ....ಗ್ರಾಮಾಫೋನ್ ಇದೆಯೋ?" ಎಂದ.

"ಇದೆ! ಆದರೆ 'ಹೀಸ್ ಮಾಸ್ಟರ್ಸ್ ವಾಯ್ಸ್' ಅಲ್ಲ--ಅದು ವಿಲಾಸೀಸ್ ವಾಯ್ಸು!"

ಆ! ಶಾಮಿಯ ಬೆನ್ನಿಗೊಂದು ಏಟು ಬಿತ್ತು!

ಊಟಕ್ಕೆ ಕುಳಿತವರು ಶಾಮಿ, ರಂಗಯ್ಯ, ಅವನ ತಂದೆ ರಾಮಯ್ಯನವರು. ಹೊರಗಡೆ ಹಜಾರದಲ್ಲಿ ರಂಗಯ್ಯನ ತಂಗಿಯರು. ಬಡಿಸುವುದಕ್ಕೆ—ಅದೇ ಆ ಕಾಫಿ ಹುಡುಗಿ. ರಂಗಯ್ಯನ ದೇವಿಯವರಿಗೆ ರಜ ಅಂತೆ. ಒಂದೊಂದು ತುತ್ತಿಗೂ, "ನಮ್ಮ ವಿಲಾಸಿ ಮಾಡಿದ್ದು"—ಪಲ್ಲವಿ—ಹಾಡುವುದಕ್ಕೆ, ರಂಗಯ್ಯ. "ಉಪ್ಪು ಸಾಕೆ? ಹುಳಿ ಸಾಕೆ? ಸಕ್ಕರೆ ಬೇಕೆ?"—ನುಡಿಗಳು--ಹಾಡುವುದಕ್ಕೆ ರಾಮಯ್ಯನವರು. ಇವರ ಹಾಡಿಗೆ ಸರಿಯಾಗಿ ಸೌಟು ಬಟ್ಟಲು ಹಿಡಿದುಕೊಂಡು ಅಡಿಗೆಯ ಮನೆಯಿಂದ ಅಂಗಳಕ್ಕೆ, ಅಂಗಳದಿಂದ ಅಡಿಗೆಯ ಮನೆಗೆ, ಆ ಕಾಫಿ ಹುಡುಗಿಯ ಹಾರಾಟ.

ನೋಡಿದ--ಇದನ್ನೆಲ್ಲಾ. "ಸರಿ! ನನ್ನ ಊಹೆ ಎಂದಾದರೂ ತಪ್ಪೇ!" ಎಂದುಕೊಂಡ, ಶಾಮಿ.

ಊಟವಾದ ಮೇಲೆ, "ಎರಡು ದಿನ ಹಿಂಚುಮುಂಚು. ಹಾಕಿ

ಕೊಳ್ಳೋ " ಎಂದು ರಂಗಯ್ಯ ವೀಳೆಯದೆಲೆಯನ್ನು ಶಾಮಿಯ ಮುಂದೆ ಇಟ್ಟ. ಶಾಮಿ ಹಾಕಿಕೊಳ್ಳಲಿಲ್ಲ.

ರಂಗಯ್ಯನ ತಂದೆ ಬಂದರು—"ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ" ಅಂತ ಭಾಸ ಹೇಳೋ ಹಾಗೆ.

"ನೀನೂ ನಮ್ಮ ರಂಗೂ ಜತೆಗಾರರಂತೆ. ನನಗೆ ಮೊದಲೇ ಗೊತ್ತಾಗಲಿಲ್ಲ, ನೋಡು. ನಮಗೇನು ನೀನು ದೂರದವನಲ್ಲಪ್ಪಾ! ನಿಮ್ಮ ಭಾವ—ವೆಂಕಣ್ಣ, ಪುರಾಣದ ಕೂಸಣ್ಣನ ಮಗ—ಅವನ ತಂಗಿ ಮಾವನ ಮನೆಯವರು ನಮಗೆ ತ್ರಿರಾತ್ರ ಜ್ಞಾತಿಗಳು. ಏನೋ, ದೈವಸಂಕಲ್ಪ ಇದ್ದರೆ, ನೀನೂ ಸ್ವಲ್ಪ ದೊಡ್ಡ ಮನಸ್ಸು ಮಾಡಿದರೆ, ಸಂಬಂಧ ಇನ್ನೂ ಹತ್ತಿರವಾಗುತ್ತೆ."

ದೂರದ ಕಪ್ಪುಮೋಡವನ್ನ ನೋಡಿ, "ಮಳೆಮೋಡ ಇರಬಹುದೆ ಇದು?" ಎಂದರೆ, ವೈಶಾಖದಲ್ಲಿ ಹತ್ತು ಹನಿ ಬಿತ್ತಂತೆ!

ಪ್ರಸ್ತಾವನೆ ಚೆನ್ನಾಗಿ ಹಾಕಿದರು. ಶಾಮಿ ಮಾತನಾಡದೇ ಸುಮ್ಮನೆ ಕುಳಿತುಕೊಂಡ.

ಅಷ್ಟರಲ್ಲಿ ರಂಗಯ್ಯ, "ವಿಚಾರ ಇಷ್ಟೆ, ನೋಡು. ಶಾಮಿ! ನನ್ನ ತಂಗಿ ವಿಲಾಸಿಗೆ—ನಿನ್ನ ಗ್ರಾಮಾಫೋನಿಗೆ—ಮದುವೆ ಆಗಬೇಕು. ನಮ್ಮಪ್ಪ ನಿನಗೆ ಕೊಡಬೇಕೆಂದಿದಾರೆ. ನಿಮ್ಮಮ್ಮ, ಅಪ್ಪ ಒಪ್ಪಿದಾರೆ. ನೀನು ಒಪ್ಪಬೇಕು. ಏನು ಹೇಳು...." ಎಂದ.

ಶಾಮಿಗೆ ಏನು ಹೇಳಬೇಕೋ ತೋಚಲಿಲ್ಲ. ಪಕ್ಕದಲ್ಲಿದ್ದ ಪುಸ್ತಕವೊಂದನ್ನು ತಿರುವಿಹಾಕುತ್ತಿದ್ದ. ಅದರಲ್ಲಿ "ಒಂದು ಖಂಡುಗ ದೈವ ಪ್ರಯತ್ನಕ್ಕಿಂತ ಒಂದು ಕೊಳಗ ಪುರುಷಪ್ರಯತ್ನವೇ ಮೇಲು" ಅಂತ ಇತ್ತು. ಅದನ್ನು ನೋಡುತ್ತಾ ಇದ್ದರೆ, ಅವನಿಗೆ ಏನೇನೋ ಯೋಚನೆ ಬಂತು.: "ಈ ಹೆಂಗಸರನ್ನ ಬ್ರಹ್ಮ ಸೃಷ್ಟಿಸದಿದ್ದರೆ ಏನು ಮುಳುಗಿಹೋಗುತ್ತಿತ್ತೋ ನಾ ಬೇರೆ ಕಾಣೆ!....ಜಗತ್ಸೃಷ್ಟಿಗಾಗಿ ಕಷ್ಟ ಪಡುವುದೇನೋ ಪಡುತ್ತಾನಲ್ಲ, ಪ್ರಾಣಿ....ಹೇಗಿದ್ದರೂ ಹುಟ್ಟಿದವರು ಸಾಯಲೇಬೇಕು....ಈ ಹೆಂಗಸರಿಗೆ ಬದಲು, ಮಂದಿ ಸತ್ತ ಹಾಗೆಲ್ಲಾ ಬರಿಯ ಗಂಡುಬೊಂಬೆಗಳನ್ನೇ ತಯಾರಿಸಿ ಏಕೆ ಭೂಮಿಗೆ ಕಳುಹ

ಬಾರದು? ..ಆ ಬ್ರಹ್ಮ.... ಅವನೇನೋ ಪ್ರಾಣಿಗಳನ್ನು ಮಣ್ಣಿನಿಂದಲೇ ಮಾಡುತ್ತಾನಂತೆ. ಅವನ ತಲೆಯಲ್ಲೂ ಮಣ್ಣೇ ತುಂಬಿದೆಯೋ ಹೇಗೋ !....ಈ ದೇವರುಗಳ ವಿಚಾರದಲ್ಲಿ 'ಇದು ಹೀಗೆ, ಇದು ಹೀಗಲ್ಲ' ಎನ್ನುವ ಹಾಗಿಲ್ಲ. ಎಲ್ಲಾ ಸಾಧ್ಯವೇ. ಗಂಡಸಿಗೆ ತಾಪತ್ರಯ ಕೊಡುವುದಕ್ಕೇ ಅವನು ಹೀಗೆ ಮಾಡುತ್ತಿರುವುದು. ಬೆಳಗಾದರೆ ' ಇದು ಇಲ್ಲ, ಅದು ಇಲ್ಲ ". ಎಷ್ಟು ಬಂದರೂ ಸಾಲದು....ಅದು ಸರಿ! ಈಗ ಇವರಿಗೆ ಏನು ಹೇಳುವುದು? ಹುಡುಗಿಯಲ್ಲಾಗಲಿ, ಮನೆಯವರಲ್ಲಾಗಲಿ ಏನೂ ದೋಷ ಬೆದಕುವಂತಿಲ್ಲ. ಒಳ್ಳೇ ರತ್ನದಂತಹ ಹುಡುಗಿ. ಏನು ಹೇಳುವುದು ?...." ಎನ್ನುತ್ತಾ--

" ಲೋ ! ಈಗಲೇ ಮದುವೆ ಮಾಡಿಕೊಳ್ಳುವುದಕ್ಕೆ ಇಷ್ಟವಿಲ್ಲವೊ " ಎಂದ.

" ನಿಮ್ಮಪ್ಪ. ಅಮ್ಮ ಮಾಡಿಕೊ ಎಂದರೆ—ಆಗ ?"

" ಇಲ್ಲಿ ಕೇಳೋ ! ಮದುವೆಯಲ್ಲಿ ಅನೇಕ ತರಹ....ಗಾಂಧರ್ವ, ರಾಕ್ಷಸೀ, ಪೈಶಾಚಿ...."

" ಆದರೇನು--ನಿನಗಿಷ್ಟವಿಲ್ಲವೇನೊ ?"

" ಸ್ವಲ್ಪ ಕೇಳು. ಮೊದಲು—ರಾಕ್ಷಸೀ ಅನ್ನುವುದು ."

" ಹಾಗಾದರೆ ನಿನ್ನ ಇಷ್ಟಾಪ್ಪ. ಇದರಲ್ಲಿ ಯಾರೂ ಬಲವಂತ ಮಾಡುವಹಾಗಿಲ್ಲ" ಎಂದು ಹೇಳುತ್ತಾ ರಾಮಯ್ಯನವರು ಎದ್ದು ಹೊರಟುಹೋದರು.

ರಂಗಯ್ಯನ ಕಡೆ ತಿರುಗಿದ, ಶಾಮಿ.

" ಲೋ ಕತ್ತೆ ! ನೀನು ಹೀಗೆ ಅಂತ ಬರೆದಿದ್ದರೆ ನಾನು ಬರುತ್ತಲೇ ಇರಲಿಲ್ಲ. ನಿನ್ನ ಕೆಲಸ ನೋಡು. ಎಲ್ಲರಿಗೂ ವೃಥಾ ಶ್ರಮ. ನಿಮಗೂ ಅಸಮಾಧಾನ. ಹೆಚ್ಚು ಮಾತು ಯಾಕೋ, ನಿನಗೆ ಬುದ್ಧಿ ಇಲ್ಲ, ಮುಖ್ಯ !"

" ಸರಿ ! ಏನು ಪ್ರಮಾದಾಪ್ಪಾ ! ಒಲ್ಲೆ ಎಂದರೆ ಬೇಡ ! ಆದಕ್ಕೇನಂತೆ, ಹೋಗಲಿ ! ಛೆಸ್ಸ್ ಆಡೋಣ, ಬಾ."

ಶಾಮಿ ಛೆಸ್ಸ್ ಆಡುವುದು, ಕುರಿ ಕತ್ತರಿಸುವವನು ಕೋಸಂಬರಿಗೆ

ಸೌತೇಕಾಯಿ ತರಿದ ಹಾಗೆ. ಆರು ಗಂಟೆಯಾಯಿತು. ಎಲ್ಲಾ ಆಟವನ್ನೂ ಗೆದ್ದವನು ರಂಗಯ್ಯ.

"ಆಟದ ಮಧ್ಯ ಮಧ್ಯೆ ಹೊಸ ಹೊಸ 'ರೂಲ್ಸು' ಮಾಡಿ ಹಾಕುತ್ತಿದ್ದರೆ, ಗೆಲ್ಲದೆ ಇನ್ನೇನು?" ಅಂತ ಶಾಮಿ ಎದ್ದ.

ಆಟ ಮುಗಿಸಿಕೊಂಡು ಕುಕ್ಕನಹಳ್ಳೀ ಕೆರೆಯ ಕಡೆಗೆ ಗಾಳಿ ವಿಹಾರಕ್ಕೆ ಹೊರಟರು.

— ೩ —

"ಅಲ್ಲಿ ನೋಡು!" ಎಂದ ರಂಗಯ್ಯ.

ಒಂದು ದೊಡ್ಡ ಮರ. ಅದರ ಎಲೆಗಳ ಮೇಲ್ಭಾಗ ಕಪ್ಪಗೂ ಕೆಳ ಭಾಗ ಬೆಳ್ಳಗೂ ಇತ್ತು. ವಾಯು ಚಲನೆ ಇಲ್ಲದಾಗ ವೃಕ್ಷವೆಲ್ಲವೂ ಕಪ್ಪಗಿರುವುದು. ಮಂದಮಾರುತಸ್ಪರ್ಶದಿಂದ ಎಲೆಗಳು ಮೆಲ್ಲನೆ ಮೇಲಕ್ಕೆದ್ದು ತಮ್ಮ ತಲಭಾಗವನ್ನು ತೋರಿದಾಗ, ವೃಕ್ಷ ಅಲ್ಲಲ್ಲಿ ಹೂ ಬಿಟ್ಟ ಹಾಗೆ ಕಾಣುವುದು. ಮರುಕ್ಷಣದಲ್ಲಿಯೇ ಆ ಆಕಸ್ಮಿಕ ಕುಸುಮಗಳು ಮರೆಯಾಗುವುವು. ಆ ನೋಟ ಬಹಳ ಅಪ್ಯಾಯನವಾಗಿತ್ತು. ಎಲ್ಲವನ್ನೂ ಮರೆತು ಅದನ್ನೇ ನೋಡುತ್ತ ನಿಂತುಕೊಂಡರು, ಇಬ್ಬರೂ.

"ಅದು ಹೇಗಿದೆಯೋ?" ಎಂದ, ರಂಗಯ್ಯ.

"ಹೇಗೆ ಎಂದರೆ....ಮುಖ ತೋರಲು ನಾಚುವ ರಮಣಿ.... ಕಪ್ಪಗೆ ದಟ್ಟವಾದ ಕುರುಳೋಳಿಯ ಕಾಮಿನಿ....ತುರುಬಿನಲ್ಲಿ ಮಲ್ಲಿಗೆಯ ದಂಡೆಯನ್ನು ಕ್ಷಣಕ್ಕೊಂದು ಬಗೆಯಾಗಿ ಮುಡಿವ ತರಳೆ...."

ಅದೇನಾಯಿತೋ ಶಾಮಿಗೆ—ಕವಿ ಮಾತಾಡಿದಂತೆ ಮಾತಾಡ ತೊಡಗಿದ!

"ಸಾಕು, ಸಾಕು, ಬಾ! ನಿನಗೂ ರಮಣಿಯರಿಗೂ ಬಹಳ ದೂರ. ಈ ಕಲ್ಲಿನ ಮೇಲೆ ಕೂರೋಣ ಬಾ!" ಅಂದ, ರಂಗಯ್ಯ.

ಕೆರೆಯ ಅಂಚಿನಲ್ಲಿದ್ದ ಶಿಲಾಪೀಠದಲ್ಲಿ ಕುಳಿತರು. ದೂರದಲ್ಲಿ ಯಾರೋ ಹಾಡುತ್ತಿದ್ದರು. ಸ್ತ್ರೀ ಕಂಠದಂತಿತ್ತು. ಆ ಹಾಡಿನ ಧಾಟಿಯನ್ನೂ ಉಕ್ಕುವ ರಸವನ್ನೂ ಧ್ವನಿಯ ಮಾಧುರ್ಯವನ್ನೂ ಸವಿದು,

ಶಾಮಿಗೆ 'ನಾನು ಮಧ್ಯಾಹ್ನ ಮಾಡಿದ್ದು ಸರಿಯೇ?' ಎನ್ನಿಸಿತು. ರಂಗಯ್ಯನ ಮುಖವನ್ನು ನೋಡಿದ. ಅವನೂ ಆ ಹಾಡಿಗೆ ಮನಸ್ಸು ಸೋತಿದ್ದ. ಯಾರೂ ಮಾತನಾಡಲಿಲ್ಲ.

ಸಂಗೀತ ನಿಂತಮೇಲೆ 'ಇನ್ನೂ ಹಾಡುವರೇನೊ?' ಎಂದು ಕುಳಿತಿದ್ದರು. ಹತ್ತಿರದ ಆಠಾರಾ ಕಛೇರಿಯಲ್ಲಿ ಏಳು ಗಂಟೆ ಹೊಡೆಯಿತು. ಶಾಮಿ ಒಂದೊಂದಾಗಿ ಎಣಿಸಿದ. ಏಳಾಯಿತು!

"ಏಳಾಯಿತು!" ಎಂದ, ಶಾಮಿ.

"ಏಳಾಯಿತು!" ಎಂದ, ರಂಗಯ್ಯ.

ಇಬ್ಬರೂ ಇನ್ನೂ ಕುಳಿತಿದ್ದರು.

ಸಂಜೆ ಸರಿದು ಬೆಳುದಿಂಗಳು ಚೆಲ್ಲಿತ್ತು. ಕೆಳಗಡೆ ಕೆರೆಯ ಸಣ್ಣಲೆಗಳು ದಡದ ಕಲ್ಲಿಗೆ ಹೊಡೆದು ಹೊರಪಡಿಸುತ್ತಿದ್ದ ಅವ್ಯಕ್ತಮಧುರಗೀತಕ್ಕೆ ಮರಗಳಲ್ಲಿ ನುಸುಳಿಬರುವ ಸುವಾಸನಾಪೂರಿತವಾಯು ಶ್ರುತಿಹಿಡಿದು ದನಿಕೊಡುತ್ತಿದ್ದರೆ, ಸುತ್ತ ನೆಲಸಿದ್ದ ಶಾಂತಗಭೀರತೆಯಲ್ಲಿ ಆ ಪ್ರಕೃತಿ ಸಂಗೀತ ಬಹಳ ಆನಂದದಾಯಕವಾಗಿತ್ತು. ಗಗನದಲ್ಲಿ, ಅವಕುಂಠನವಂಚಿತಳಾದ ಮುಗ್ಧೆಯ ಮುಖಬಿಂಬದಂತೆ, ಮೋಡಗಳ ಮರೆಯಿಂದ ಜಾರಿದ ನಿರ್ಮಲವಾದ ಚಂದ್ರಬಿಂಬ ತೊಳಗುತ್ತಿತ್ತು. ಚಂದ್ರಬಿಂಬದ ಮರುಬಿಂಬ ಕೆರೆಯ ಕಿರುದೆರೆಗಳಲ್ಲಿ ಲೀನವಾಗಿತ್ತು. ಮತ್ತೆ ನೀಲದೆಡೆ ನೋಡಿದರೆ, ದೀಪಕ್ಕೆ ಎರಗುವ ಹುಳುಗಳ ಬಳಗದಂತೆ ಸಣ್ಣ ಸಣ್ಣ ಮುಗಿಲುಗಳು ಚಂದಿರನನ್ನು ಕಾಡುತ್ತಿದ್ದುವು. ಪಡುವಲದಿಕ್ಕಿನಲ್ಲಿ ಗೂಢ ಗಾಢಾಂಧಕಾರ. ಪೂರ್ವದಲ್ಲಿ ತಾರೆಗಳು ಧರೆಗಿಳಿದಂತೆ ಮಿನುಗುವ ಪುರದ ವಿದ್ಯುದ್ದೀಪಗಳು. ಹಿಂಭಾಗದಲ್ಲಿ ಹಸುರು ಹುಲ್ಲಿನ ನಡುವೆ ಕುಸುಮಗಳನ್ನು ನೇದಿರುವ ಪರಿಮಳದ ಶಯ್ಯೆ;....ಮರದೆಲೆಯ ಛಾಯೆಗಳ ಪಕ್ಕದಲ್ಲಿ ಚಂದ್ರಿಕೆಯನ್ನಿಟ್ಟು ಸಮೆದಿರುವ ಹೊದಿಕೆ. ಆ ನಡುವೆ ಚಾಮರವನ್ನಿಕ್ಕಿದಂತೆ ಮೆಲುಮೆಲನೆ ಅಲುಗಾಡಿ ಗಾಳಿ ಬೀಸುವ ಮರಗಳು. ಪಕ್ಕದಲ್ಲಿ ಶಿಲಾಪೀಠದ ಚೌಕಟ್ಟಿಗೆ ದಟ್ಟವಾಗಿ ಹೆಣೆದುಕೊಂಡಿದ್ದ ಸುಮಭರಿತವಾದ ಬಳ್ಳಿ ಪ್ರಕೃತಿಪುರುಷರ ಅನ್ಯೋನ್ಯಭಾವವನ್ನು ನೆನಪುಕೊಡುತ್ತಿತ್ತು. ಅನತಿದೂರದಲ್ಲಿ, ವಾಯುಮಾರ್ಗದಲ್ಲಿ ಸುಳಿವ ಸುರ

ಸಾರಿಯು ಸೆರಗೆಂಬಂತೆ ಅಠಾರಾಕಛೇರಿಯ ಮೇಲ್ಭಾಗದಲ್ಲಿ ಬಾವುಟ ಹಾರುತ್ತಿತ್ತು.

ಆ ದೃಶ್ಯದಿಂದ ಶಾಮಿಯ ಮನಸ್ಸಿಗೆ ಒಂದು ಬಗೆಯ ಆನಂದ, ಒಂದು ಬಗೆಯ ತೃಪ್ತಿ ತೋರಿತು. "ಕೈವಲ್ಯ, ಮೋಕ್ಷ ಪಡೆಯುವು ದೆಂದರೆ, ಭೂಮಿಯ ಮೇಲಿರುವುದೆನ್ನುವ ಯಾವುದೋ ನಿತ್ಯತೃಪ್ತಿನಿಲಯ ವೆನ್ನುವ ಪ್ರದೇಶಕ್ಕೆ ಹೋಗುವುದೆಂದಲ್ಲ. ಪ್ರಕೃತಿಯೊಡನೆ ನಡೆದು, ಅವಳ ದಿವ್ಯಕೃತಿಗಳಲ್ಲಿ ನಮ್ಮನ್ನು ಮರೆಯುವುದೇ ಕೈವಲ್ಯ, ಪರಮಪದ" ಎನ್ನಿಸಿತು.

ಹಾಗೆಯೇ ಯೋಚಿಸುತ್ತಿರಲು, ಕೃಷ್ಣಪಕ್ಷದ ಕಗ್ಗತ್ತಲೆಯಲ್ಲಿ ಹಗ್ಗ ವೆಂದರೆ ಹಾವೆನ್ನುವ ಹೇಡಿಗೆ ಜೀವವಿರುವ ಕಾಳಸರ್ಪವನ್ನು ಕೊರಳಿಗೆ ಹಾಕಿದಂತಾಯಿತು. ಶಾಮಿಯ ಗುಂಡಿಗೆ ಧಗ್ಗೆಂದಿತು. ಮೈತುಂಬ ಬೆವರು. ತುಟಿ ಒಣಗಿತು. ಕಣ್ಣೀರು ತಡೆದರೂ ನಿಲ್ಲದು. ಹೇಳಲು ಅಸದಳವಾದ ಸಂಕಟವುಂಟಾಯಿತು. ಕ್ಷಣಕಾಲದ ಹಿಂದೆ ನೋಡಿದ ನೋಟದ ರಮಣೀಯತೆಯು ಮನಸ್ಸಿನಿಂದ ಮರೆಯಾಯಿತು. ಮ್ಲೇಚ್ಛರು ವಿಗ್ರಹಗಳನ್ನೊಡೆದ ಮೇಲೆ, ಹಿಂದಿನ ಸೌಂದರ್ಯದ ಅವಶೇಷವನ್ನು ಅಲ್ಲಲ್ಲಿ ತೋರುತ್ತಿರುವ ಪಾಳುದೇಗುಲದಲ್ಲಿ ಒಬ್ಬನೇ ಇರುವಂತೆ ಭಾಸವಾಯಿತು. "ಎಷ್ಟು ಸೌಂದರ್ಯವಿದ್ದರೇನು! ಈ ನೋಟಗಳ ಸ್ವಾಭಾವಿಕ ಲಕ್ಷಣಕ್ಕೆ ಜೀವಕಳೆ ಎರೆಯಲು ಮುಖ್ಯಮೂರ್ತಿ ಇಲ್ಲವಲ್ಲಾ!" ಎನಿಸಿತು. ಆರಾಧನೆಯ ದೈವವಿಲ್ಲದೆ, ಇಂತಹ ಪಾಳುದೇಗುಲಗಳನ್ನು ಮುಂದೆಂದೂ ನೋಡೆನೆಂದು ಮನಸ್ಸುಮಾಡಿಕೊಂಡು, ಶಾಮಿ ಝುಗ್ಗನೆದ್ದು ಮನೆಯ ಕಡೆಗೆ ಹೊರಟ.

ರಂಗಯ್ಯ ಏನು ಯೋಚಿಸುತ್ತಿದ್ದನೋ ಕಾಣೆ; ಕುರಿಯನ್ನು ಹಿಂಬಾಲಿಸುವ ಕುರಿಯಂತೆ ಅವನೂ ಶಾಮಿಯ ಹಿಂದೆ ಬರುತ್ತಿದ್ದ. ದಾರಿಯಲ್ಲಿ ಯಾರೂ ಮಾತಾಡಲಿಲ್ಲ. ಶಾಮಿಯ ಆಲೋಚನೆಗಳು ಅವನ ಮನಸ್ಸನ್ನು ತುಂಬಿದ್ದುವು. ರಂಗಯ್ಯ—ಅವನೂ ನೀರವ.

ಮನೆಯ ಬಳಿ ಬಂದರು.

ಶಾಮಿ, ಅದುವರೆಗೆ, ಅದೇನು ಯೋಚಿಸುತ್ತಿದ್ದನೋ, ಮನೆಗೆ

ಬರುವ ವೇಳೆಗೆ ಅದೇನು ನಿರ್ಧಾರಕ್ಕೆ ಬಂದಿದ್ದನೋ, "ಹೌದು, ವಿಷವೇ ಅಮೃತವಾಗಿ ಪರಿಣಮಿಸುವುದೂ ಉಂಟು" ಎಂದು ಪ್ರಜ್ಞೆಯಿಲ್ಲದೆ ಎಂದುಬಿಟ್ಟ.

"ಏನೋ—ಹಾಗೆಂದರೆ?" ಎಂದು ಕೇಳಿದ, ರಂಗಯ್ಯ.

"ಅಲ್ಲಾ, ದೇವತೆಗಳಿಗೆ ಹಾಲಾಹಲವಾದದ್ದು ಪರಶಿವನಿಗೆ ಅಮೃತವಾಯಿತಲ್ಲ---ಅದನ್ನು ಯೋಚಿಸುತ್ತಿದ್ದೆ" ಎಂದ, ಶಾಮಿ.

ಒಬ್ಬರ ಮುಖವನ್ನೊಬ್ಬರು ನೋಡಿದರು. ರಂಗಯ್ಯ ಶಾಮಿಯ ಮಾತನ್ನು ನಂಬಿದಂತೆ ತೋರಲಿಲ್ಲ.

— ೪ —

ಯಥಾಪ್ರಕಾರ ರಾತ್ರಿಯೂಟ.

ಶಾಮಿಗೆ ಸಂಜೆಯಿಂದ "ಮಧ್ಯಾಹ್ನ ಮಾಡಿದ್ದು ಪೆಚ್ಚು ಕೆಲಸ!.... ಇವರು ಪುನಃ ಆ ಮದುವೆ ಪ್ರಸ್ತಾಪ ಎತ್ತಿದರೆ....ಸಂಜೆ ಬಂದ ಲಾಗಾಯಿತು ಆ ಹುಡುಗಿಯನ್ನು ಕಂಡರೆ ಏನೋ ವಿಧವಾಗಿ ಹೋಗಿದೆ. ಭಕ್ತಿ, ಮರ್ಯಾದೆ, ಪ್ರೇಮ ಎಲ್ಲಾ ಚೌಚೌ...." ಎನ್ನಿಸುತ್ತಿತ್ತು.

ಅವನು ಆ ಯೋಚನೆಯಲ್ಲಿರುವಾಗ, "ಸಂಕೋಚ ಬೇಡಪ್ಪ, ಸರಿಯಾಗಿ ಊಟಮಾಡು" ಎಂದರು, ರಾಮಯ್ಯನವರು.

ಇದು ಮನುಮಾಂಧಾತಾದಿಗಳ ಕಾಲದಿಂದ ಬಂದ ವಾಡಿಕೆ. ಊಟಮಾಡುವಾಗ ಅತಿಥಿಗಳಿಗೆ ಇದನ್ನು ಹೇಳಲೇಬೇಕು. ಸ್ನಾನಮಾಡಿ ಊಟಕ್ಕೆ ಹೊರಟಿರುವ ಶಾಸ್ತ್ರಿಗಳನ್ನು ಕಂಡರೆ, "ಎದ್ದಿರಾ ಶಾಸ್ತ್ರಿಗಳೇ?" ಎನ್ನುವ ಹಾಗೆ.

ಶಾಮಿ "ಅಯ್ಯೋ, ನನಗೆ ಸಂಕೋಚ ಏನು ಹೇಳಿ!" ಎಂದ. ಇದನ್ನು ಹೀಗೆಯೇ ಹೇಳಿಯೇ ತೀರಬೇಕು. ಇಲ್ಲದಿದ್ದರೆ ಗೌರವಕ್ಕೆ ಕಡಿಮೆ – ನಮಗೆ ಮಾತ್ರವಲ್ಲ, ಅವರಿಗೂ.

"ಏನಾದರೂ .... ಮಧ್ಯಾಹ್ನ ಎಂದುದಕ್ಕೆ .... ಅಸಮಾಧಾನಪಟ್ಟು ಕೊಂಡು...." ಎಂದರು, ರಂಗಯ್ಯನವರು.

ಸ್ವಲ್ಪ ಪಟ್ಟು ಸಿಕ್ಕಿದ ಹಾಗಾಯಿತು.

" ಯಜಮಾನರೆ! ಈ ಅಸಮಾಧಾನ, ಕೋಪ, ತಾಪ.... ನೋಡಿ-·· ಇವು ವಿಷದ ಹಾಗೆ. ವಿಷವಾದರೂ ವಾಸಿ. ಇವು ವಿಷಕ್ಕಿಂತ ಕೇಡು ... ಕೊಂಚ ಕೊಂಚವಾಗಿ, ಕೊಂಚ ಕೊಂಚವಾಗಿ, ಕೊಲ್ಲುತ್ತೆ.... ಮೈಯಲ್ಲಿರೋ ಕೆಂಪುರಕ್ತವೆಲ್ಲಾ ಬೆಳ್ಳಗೆ ಆಗಿಹೋಗುತ್ತೆ....ಆಗ...."

"ಯಾವಾಗ ಆಯಿತೋ ಈ ಜ್ಞಾನಾರ್ಜನೆ?"

ರಂಗಯ್ಯನಿಗೆ ವೇಳಾವೇಳೆಯ ಜ್ಞಾನವಿಲ್ಲ. ಕೊಂಚವೂ ಇಲ್ಲ.

" ನಿಮ್ಮ ತಂದೆತಾಯಿ ಒಪ್ಪಿದ್ದಕೋಸ್ಕರ ನಾನೂ ಪ್ರಸ್ತಾಪಎತ್ತಿದೆ. ಅಷ್ಟೆ. ಇಲ್ಲದೆ ಇದ್ದರೆ...." ಎಂದರು, ರಾಮಯ್ಯನವರು.

" ಅದೇನು ಬಿಡಿ, ಯಜಮಾನರೆ. ನೋಡಿ, ನಾವಿರುವುದು ಹಿಂದೂದೇಶ! ಆರ್ಯಾವರ್ತ ಪುಣ್ಯಭೂಮಿ! ಶ್ರೀರಾಮನು ತಂದೆಗೋಸ್ಕರ ರಾಜ್ಯ ತೊರೆದು ಕಾಡಿಗೆ ಹೋದ ನಾಡು! ನಮ್ಮ ಭೀಮ ಕೂಡ ಹಿರಿಯವ ಧರ್ಮರಾಯ ಎನ್ನುತ್ತ, ಎಂತೆಂತಹ ಅಪಮಾನ ಸಹಿಸಿದ! ಅಂಥವರೆಲ್ಲ ಹುಟ್ಟಿದ ಈ ದೇಶದಲ್ಲಿ... ಏನೋ ದುರ್ಯೋಧನನಂಥವರು ಒಬ್ಬಿಬ್ಬರು ಇದ್ದರೂ....ಗುರುಹಿರಿಯರು ಎಂದುದಕ್ಕೆ ' ಅಸ್ತು ' ಎನ್ನುವುದು ನಮ್ಮ ಕೆಲಸ....ಅದರಿಂದ ನಮಗೂ ಶ್ರೇಯಸ್ಸು...." ಇತ್ಯಾದಿ., ಇತ್ಯಾದಿ., ಅಂದ, ಶಾಮಿ.

ಅಲ್ಲಾ, ಮನುಷ್ಯ ಆಶೆಗೆ ವಶನಾದ ಎಂದರೆ, ಅವನ ಬುದ್ಧಿ, ಅವನ ಮಾತು, ಹೇಗಾಗುತ್ತೆ ನೋಡಿ! ಅಲ್ಲ, ಮಧ್ಯಾಹ್ನ ಅಂದದ್ದು ಏನು, ಈಗ ಅಂದಷ್ಟು ಏನು, ಇವರು ಏನು ಅಂದುಕೊಂಡಾರು— ಎನ್ನುವುದೇ ಬೇಡವೆ!

ಆ ಕಾಫಿಹುಡುಗಿ ಎಲೆಗೆ ಬಡಿಸುವುದಕ್ಕೆ ಬಂದರೆ, ಬಡಿಸಿದ್ದೆಲ್ಲಾ ಎಲೆಯ ಹೊರಗೇ ಬೀಳಬೇಕೆ!

ರಾತ್ರಿ ಮಲಗಿಕೊಳ್ಳುವಾಗ, ಪುರುಷಪ್ರಯತ್ನ ಬಂದು. " ಹೇಳು, ಶಾಮಣ್ಣ. ನಾನು ಹೆಚ್ಚೊ? ದೈವಪ್ರಯತ್ನ ಹೆಚ್ಚೊ?" ಎಂದಿತು.

ದೈವಪ್ರಯತ್ನ ಬಂದು, " ಅಯ್ಯಾ! ಗುಣಕ್ಕೆ ಮಾತ್ಸರ್ಯವೇನು! ಯಾರು ಹೆಚ್ಚೆಂಬುದನ್ನು ನಿಷ್ಪಕ್ಷಪಾತವಾಗಿ ಹೇಳಿಬಿಡು" ಎಂದಿತು.

ಅಷ್ಟರಲ್ಲಿ ಆ ಎರಡು ಪ್ರಯತ್ನಗಳಿಗೂ ಅವವುಗಳಲ್ಲೇ ವಾಗ್ವಿವಾದ ಮೊದಲಾಯಿತು.

"ನಾನು ಹೆಚ್ಚು!" ಎಂದು, ಪುರುಷಪ್ರಯತ್ನ.

"ಕುಳಿತುಕೊಳ್ಳೊ ಸುಮ್ಮನೆ! ನಾನು ಹೆಚ್ಚು!" ಎಂದು, ದೈವ ಪ್ರಯತ್ನ.

"ಎಲ್ಲಾ ಕಂಡಿದ್ದೇನೆ ಕಣೊ! ನಾನೇ ಹೆಚ್ಚು!"

"ನಾನು ಹೆಚ್ಚೋ!"

"ನಾನೇ ಹೆಚ್ಚು!"

"ನಾನು........"

"ನಾನು........"

"ಹೆಚ್ಚು........"

"ಹೆ........"

ಮುಂಪೇನಾಯಿತೋ ತಿಳಿಯಲಿಲ್ಲ. ಶಾಮಿಗೆ ನಿದ್ರೆ ಬಂತು.

# ವಸೂಲಿ

ಮೊನ್ನೆ ನಮ್ಮ ಶಾಮಿಯ ಲಗ್ನಪತ್ರಿಕೆ ನೋಡಿ, ಏನೇನೋ ಲೆಕ್ಕ ಮಾಡಿ, ಅವರಪ್ಪ "ಲೋ! ನಿನಗೆ ಮದುವೆಯಾಗಿ ವರ್ಷೂವರೆ ಆಯಿತು" ಎಂದು ಏನೋ ಮಾತಿನ ಮೇಲೆ ಮಾತು ಬಂದು, ಹೇಳಿದರು. ನಮ್ಮ ಮನೆ ಪುರೋಹಿತರು, ವೆಂಕಣ್ಣನವರು, ಬೆರಳು ಮಡಿಸಿ. ಬೆರಳು ಬಿಚ್ಚಿ' 'ನಮ್ಮ ರಾಯರಿಗೆ ಮದುವೆಯಾಗಿ, ಅಧಿಕಮಾಸವೂ ಸೇರಿಕೊಂಡರೆ' ಮುಂದಿನ ಚೌತಿಗೆ ವರ್ಷದ ಮೇಲೆ ಆರೂವರೆ ತಿಂಗಳು ಮೂರು ದಿನ ಆಗುತ್ತೆ' ಎಂದರು. ಆದರೆ ಶಾಮಿಯ ಲೆಕ್ಕಾಚಾರದಲ್ಲಿ, ತಾನು ಯಾವತ್ತು ಆ 'ವಸೂಲಿ' ಮಾಡಿದನೋ, ಆ ದಿನದಿಂದ ಲೆಕ್ಕ, ಸುಮಾರು ಹದಿನೈದು ಇಪ್ಪತ್ತು ದಿನವಿರಬಹುದು—ಅವನಿಗೆ ಮದುವೆಯಾಗಿ, ಸರಿಯಾಗಿ. ಇರಲಿ.

ನಮ್ಮ ಪುರೋಹಿತರ ಮಾತಿನ ಹಾಗೆಯೇ ವರ್ಷದ ಮೇಲೆ ಆರೂವರೆ ತಿಂಗಳು ಮೂರು ದಿನ ಆದರೂ, ಶಾಮಿ ಮೊನ್ನೆ ಹೋಗಿದ್ದದ್ದೂ ಸೇರಿದರೆ, ಅವನು ತನ್ನ ಮಾವನ ಮನೆಗೆ ಹೋಗಿರುವುದು ಹದಿಮೂರು ಸಲವಾಗುತ್ತೆ. ಹಿಂದೆ ಹನ್ನೆರಡು ಸಲ ಹೋದವನು—ಹೋಗುವಾಗ ನಗುತ ನಗುತ ನಗುತ ಹೋಗುವುದು, ಅಲ್ಲಿಂದ ಬರುವಾಗ ಸಿಡುಗುಟ್ಟುತ ಬರುವುದು— ಹೀಗಾಗಿಹೋಗಿತ್ತು. ಅಲ್ಲಿ ಹೊತ್ತುಹೊತ್ತಿಗೆ ಸರಿಯಾಗಿ ಹೊಟ್ಟೆಗೆ ಹಿಟ್ಟಿಲ್ಲವಂತೆ. ಅವನ ಅತ್ತೆಯವರೇನೋ ರುಚಿರುಚಿಯಾಗಿ ತಿಂಡಿ ಮಾಡಿ ಕಳುಹಿಸುವರಂತೆ. ಅದರ ರೂಪ ನೋಡಿ, ಕಂಪನ್ನು ಕುಡಿದು, ತಿನ್ನಬೇಕೆಂದು ಶಾಮಿಗೆ ಆಸೆಯಾಗುವುದಂತೆ. ಆದರೆ ತಿನ್ನಲು ಬೇಕಾಗುತ್ತಿರಲಿಲ್ಲವಂತೆ. ಏಕೆಂದರೆ, ಅವನು ಅಲ್ಲಿಗೆ ಹೋಗುವುದು ತನ್ನ ವಿಲಾಸಿನಿಗಾಗಿಯೇ, ಇಲ್ಲ ಇವರ ತಿಂಡಿಗಾಗಿಯೇ? ತಿಂಡಿ ಮಾತ್ರವಿದ್ದು ವಿಲಾಸಿನಿಯಿಲ್ಲದಿದ್ದರೆ, ಆ ತಿಂಡಿಯಲ್ಲಿ ತಾನೆ ಏನು ಸಾರವಿರುತ್ತದೆ? ಅವಳನ್ನು ಇರು ಎನ್ನೋಣ ಎಂದರೆ, ಅವಳ ಕೆಲಸಗಳೆಲ್ಲ ಹೆಂಗಸರ ಮನಸ್ಸಿನ ಹಾಗೆ—ಅಲ್ಲ, ಮಿಂಚಿನ ಹಾಗೆ. ಕಣ್ಣುಮುಚ್ಚಿ ಕಣ್ತೆರೆಯುವಷ್ಟರಲ್ಲಿ, ಅವನ ಮುಂದೆ ತಿಂಡಿ ಹಾಜರಾಗಿರುವುದಂತೆ, ಆದರೆ ಅವಳು

ಮಾತ್ರ ಅಲ್ಲಿಲ್ಲವಂತೆ! ತಿಂಡಿ ತಂದಿಟ್ಟವಳೇನೊ ಅವಳೇಯಂತೆ. ಹಾಗಾಗಿ, ಆ ತಿಂಡಿ ಕಂಡರೆ ಅಗಿದು ಉಗಿದ ಕಬ್ಬಿನ ಹೀದೆಯಂತೆ ಕಾಣುತ್ತಿತ್ತಂತೆ--- ರಸ ಕೊಂಚವೂ ಇಲ್ಲದೆ. ಆದರೆ 'ವಿಲಾಸಿಯನ್ನು ಕಳುಹಿಸಿ' ಎಂದು ಕೇಳುವುದು ಹೇಗೆ? ಹೀಗಾಗಿ ಹೇಳುವುದಕ್ಕಿಲ್ಲ, ಹೇಳದಿರುವುದಕ್ಕಿಲ್ಲ, ಆ ಸಂಕಟ. ಪಾಪ, ಹೊಟ್ಟೆಗಿಲ್ಲ, ಮನಸ್ಸಿಗೆ ನೆಮ್ಮದಿಯಿಲ್ಲ. ಹನ್ನೆರಡು ಸಲವೂ ಹೀಗೆಯೇ ಆಯಿತಂತೆ. ಅವನ ಅತ್ತೆಯವರು ಮಾತ್ರ 'ಅಳಿಯಂದರ ರುಚಿ ಏನೊ ಎಂತೊ' ಎಂದು ಒಂದೊಂದು ದಿನ ಒಂದೊಂದು ವಿಧ ಪಾಕಕ್ಕೆ ಮೊದಲುಮಾಡಿ, ಕೊನೆಗೆ 'ಇವರಿಗೂ ತಿಂಡಿಗೂ ದ್ವೇಷ' ಎಂದು ತೀರ್ಮಾನಿಸಿ ಸುಮ್ಮನಾಗಿದ್ದರಂತೆ ಆದರೆ, ಅವನ ಹೊಟ್ಟೆಯ ಅಳತೆ ಅವನ ಜತೆಯಲ್ಲಿ ಹೋಟಲಿಗೆ ಹೋದವರಿಗೇ ಗೊತ್ತು.

ಮದುವೆಯಾದ ತರುಣದಲ್ಲಿ ಅವನ ಉತ್ಸಾಹವೆಷ್ಟು! ಮೊದಲು ಮೊದಲು ವಿಲಾಸಿನಿಗೆಂದು ಸಿಲ್ಕ್ ತೆಗೆದುಕೊಂಡು ಹೋದ. ಅವಳನ್ನು ಮಾತನಾಡಿಸಲು ಸರಿಯಾದ ಸಮಯಾನುಕೂಲಗಳು ಸಿಕ್ಕದೆ ಆಶಾಭಂಗವಾಯಿತು. ವಸ್ತುತಃ ಹಾಗಲ್ಲದಿದ್ದರೂ, ಮನೆಯವರು ಬೇಕೆಂದೇ ಅವರು ಮಾತನಾಡುವುದಕ್ಕೆ ಅಡಚಣೆ ಮಾಡುತ್ತಿರುವಂತೆ ಭಾಸವಾಯಿತು. ಮತ್ತೇನು? ಹುಡುಗಿ ಬರುವುದೇ ಅಪರೂಪ. ಬಂದರೂ ನಿಲ್ಲುವುದು ಅಪರೂಪ. ನಿಂತರೂ ಜತೆಯಲ್ಲಿ ಆ ತಂಗಿಯರ ಕಾವಲು. ಅವನಿಗೂ ಬಹಳ ಅಸಮಾಧಾನವಾಗಿ, ಕೊನೆಗೆ ತಂದಿದ್ದ ಸಿಲ್ಕನ್ನು ಅಂಗಡಿಗೇ ವಾಪಸು ಕೊಟ್ಟುಬಿಟ್ಟನಂತೆ. ತಾನು ಓದಿ ಓದಿ ತೃಪ್ತಿಯಾಗದಿದ್ದ ಹಲವು ಸುಂದರವಾದ ಬರಹಗಳನ್ನು ಅವಳಿಗೆ ಓದಿಹೇಳಿ ಆನಂದಪಡಿಸಬೇಕೆಂದಿದ್ದ ಅವನ ಉತ್ಸಾಹದ ಪೂರ್ಣಪ್ರವಾಹ ಒಮ್ಮೆಗೇ ಬತ್ತಿ ಹೋಯಿತಂತೆ. ಹೀಗೆ ಮಾವನ ಮನೆಯಿಂದ ಹಿಂದಿರುಗುವಾಗ ಮನಸ್ಸಿಗೆ ಕರೆಕರೆಯಾದರೂ, ಪುನಃ ಹೋಗಬೇಕೆಂಬಾಸೆ ಮಾತ್ರ ಮನಸ್ಸಿನಿಂದ ತೊಲಗಲಿಲ್ಲವಂತೆ. ಪುನಃ ಪುನಃ ಹೋಗುವುದೇಕೆ---ತಿಳಿದೂ, ತಿಳಿದೂ? ಮಧು ಇದ್ದ ಕಡೆ, ದುಂಬಿ ಬರುವುದು ಸಹಜ. ಜೀವವಿರುವ ತನಕ ಮನುಷ್ಯನಿಗೆ ಆಸೆಯುಂಟು. ಆದ್ದರಿಂದಲೇ ಶಾಮಿ ಹದಿಮೂರನೆಯ ಸಲ--ಬೆಂಗಳೂರಿನಿಂದ ಮತ್ತೆ ಮಂಡ್ಯಕ್ಕೆ ಹೊರಟ.

ಬೆಂಗಳೂರು ಬಿಟ್ಟು ಮಂಡ್ಯವನ್ನು ತನ್ನ ಮಾವನ ಊರು ಸೇರುವವರೆಗೂ ಅವನಿಗೆ ದೇವೀಧ್ಯಾನವೇ !

*   *   *

ಹಾಗೂ ಹೀಗೂ ಆಗಿ ಐದು ಗಂಟೆ ಸುಮಾರಿಗೆ ರೈಲು ಮಂಡ್ಯಕ್ಕೆ ಸೇರಿತು. 'ಯಾವ ಮಹಾರಾಯ ಮಾಡಿದನೋ ಗಂಟೆಗೆ ಅರುವತ್ತು ನಿಮಿಷ!' ಎಂದು ಶಾಮಿಗೆ ತಹತಹ. 'ಮಂಡ್ಯಾ! ಮಂಡ್ಯಾ!' ಎಂದ. ಪೋರ್ಟರು. ಶಾಮಿ ಎದ್ದು, ಪಂಚೆ ಕೋಟಿನ ಮೇಲಿದ್ದ ಧೂಳು ಒದರಿ, ವೇಷ ಸರಿಯಾಗಿದೆಯೆ ಎಂದು ರೈಲಿನ ಕಿಟಕಿಗೆ ಹಾಕಿರುವ ಕನ್ನಡಿಯಲ್ಲಿ ನೋಡಿಕೊಂಡು, ತಲೆಕೂದಲನ್ನು ಸವರಿಸಿ, ಗಂಟನ್ನು ಕೈಯಲ್ಲಿ ಹಿಡಿದು, ರೈಲಿಳಿದ.

ಟಿಕೀಟು ಕೊಡುವುದಕ್ಕೆ ಹೋದಾಗ, ಸ್ಟೇಷನ್ ಮಾಸ್ಟರು "ಓಹೋ! ಯಾವಾಗ ಬಂದಿರಿ?" ಎಂದು ಕೇಳಿ, "ಇವರೇ ಸ್ವಾಮಿ! ನಮ್ಮ ವೆಂಕಟರಾಯರ ಮಕ್ಕಳ ಅಳಿಯಂದಿರು" ಎಂದು ಪಕ್ಕದವರಾರಿಗೋ ಅವನ ಪರಿಚಯ ಮಾಡಿಕೊಟ್ಟರು. "ಹಾಗೆಯೋ!" ಎಂದು ಹಲ್ಲು ಕಿರಿದರು, ಆ ಮಹಾಶಯರು. "ಶುರುವಾಯಿತಪ್ಪ ಇನ್ನು!" ಎಂದುಕೊಂಡ, ಶಾಮಿ.

ಸ್ಟೇಷನ್ ಮಾಸ್ಟರನ್ನು ಬೀಳ್ಕೊಂಡು, ಊರು ಸೇರಲು ಹೊರಟ; ದಾರಿಯಲ್ಲಿಯೆ ಮೊದಲಾಯಿತು: "ರಾಮಯ್ಯನವರ ಅಳಿಯಂದಿರು ಬಂದರು! ಯಾವಾಗ ದಯಮಾಡಿಸಿದ ಹಾಗೆ, ಬುದ್ಧೀ?" ಎಂದು ಊರಿನ ರೈತರು ಮಾತನಾಡಿಸುತ್ತ ಬಂದರು. ಊರೊಳಕ್ಕೆ ಬಂದರೆ, ಅಲ್ಲಿಯ ಹೆಂಗಸರು, "ಲ್ರೇ! ಬನ್ರೇ! ಶಾರದಮ್ಮನವರ ಅಳಿಯ ಬರ್ತಿದಾರೆ" ಎಂದದ್ದು ಕೇಳಿಸಿತು.

ಶಾಮಿ ಸಾಮಾನ್ಯವಾಗಿ ಸಂಕೋಚ ಪ್ರಕೃತಿಯವನಾದರೂ, ಈ ಊರಿನವರಿಗೆಲ್ಲ ತಾನು ಎಷ್ಟು ಮಾನ್ಯ, ತನ್ನನ್ನು ಕಂಡರೆ ಇವರಿಗೆ ಎಷ್ಟು ಮಮತೆ, ಮರ್ಯಾದೆ, ಎಂದು ಹೆಮ್ಮೆ. ರೈತರ ಬಳಿ ಗಂಭೀರವಾಗಿ ಒಂದು ಗತ್ತಿನಿಂದ ಮಾತನಾಡುತ್ತ, ಮೈನೆಟ್ಟಗೆ ನಿಲ್ಲಿಸಿ ಪಟ್ಟದಾನೆ ಬರುವಂತೆ ತೂಗಿ ಬರುತ್ತಿದ್ದನಂತೆ.

ಬರುಬರುತ್ತ ಚಿಕ್ಕ ಪುಟ್ಟ ಹುಡುಗಿಯರು "ಲೇ! ಸುಬ್ಬಿ! ಬಾರೆ. ವಿಲಾಸಿ ಗಂಡ ಬಂದ" ಎಂದದ್ದು ಕಿವಿಗೆ ತಾಕಿತು. ಅವನಿಗೇಕೋ ಅದನ್ನು ಕೇಳಿ ಬಹಳ ಇದಾಗಿಹೋಯಿತು. ಭೂಮಿ ಪಾತಾಳಕ್ಕಿಳಿಯಿತು; ಮನೆಗಳ ಸೂರು ಮುಗಿಲಿಗೇರಿತು; ಬೆಟ್ಟದ ಬಳಿ ಸುಳಿವ ಇರುವೆ ಯಂತಾದ ಶಾಮಿ. ಕಣ್ಣಿಗೆ ಕಪ್ಪು ಕವಿಯಿತು. ಹಾಗೆ ಹೀಗೆ ಮಾಡಿ, ಕಾಲೆಳೆದುಕೊಂಡು ಮನೆಯ ಬಳಿ ಬಂದನಂತೆ

ಬಂದರೆ ...ತಾನು ಇಂತಹ ಟ್ರೈಲಿನಲ್ಲಿ ಬರುವೆನೆಂದು ವಿಲಾಸಿನಿಗೆ ಕಾಗದ ಬರೆದಿದ್ದನಂತೆ. ಮನೆಯ ಹತ್ತಿರ ಬಂದಾಗ, "ಕಿಟಕಿಯಲ್ಲಿ ನಿಂತು ಕಾಯುತ್ತಿರುತ್ತಾಳೆ ನನ್ನ ವಿಲಾಸ" ಎಂದು ಮನಸ್ಸಿನಲ್ಲಿ ಮಾಡಿ ಕೊಂಡು, ಅವಳ ಕೋಣೆಯ ಕಿಟಕಿಕಡೆ ನೋಡಿದನಂತೆ. ಆ ಕಿಟಕಿಯ ಬಾಗಿಲು ತೆರೆದಿರುವುದೇ, ಅವನ ಆಸೆಗೆ ಜೀವಪೆರೆದಂತೆ. ಆ ಕಿಟಕಿ ಬಾಗಿಲು ಮುಚ್ಚಿತ್ತು. ಅವನ ಉಲ್ಲಾಸವಡಗಿತಂತೆ. ಪಕ್ಕದಲ್ಲಿ ತಿರುಗಿ ನೋಡಿದರೆ, ತಲೆ ತಗ್ಗಿಸಿ, ಸೊಂಟದಲ್ಲೊಂದು ಕೊಡ ಹೊತ್ತು, ವಿಲಾಸಿನಿ ಕೊಳದ ಕಡೆ ಹೋಗುತ್ತಿದ್ದಳಂತೆ! ಎಲ್ಲಿಂದ ಬಂದಳಿವಳು? ಹಿತ್ತಿಲ ಬಾಗಿಲಿನಿಂದ ಬಂದಿರಬೇಕು. ಶಾಮಿಗೆ ಮನಸ್ಸು ಕೆಟ್ಟಿತಂತೆ.-- ತಾನು ಬರುತ್ತೇನೆ ಎಂದು ತಿಳಿದರೂ, ಇವಳು ಮಾತನಾಡಲು ನಿಲ್ಲದೆ, ಹೀಗೆ ಹೊರಟಿರುವಳಲ್ಲ, ಎಂದು. ಜತೆಯಲ್ಲಿ ಬಂದಿದ್ದ ರೈತರನ್ನು ಕೂಡ ಮಾತನಾಡಿಸದೆ, ಸರ್ರನೆ ಬೀದಿ ಹೊರಗಿನ ಚಿಕ್ಕಮನೆಯಲ್ಲಿ ಗಂಟಿಸೆದು, ಕುರ್ಚಿಯ ಮೇಲೆ ಕುಕ್ಕರಿಸಿಕೊಂಡನಂತೆ.

"ಥೂ! ಯಾಕೆ ಬಂದೆನೊ ಈ ಹಾಳೂರಿಗೆ!" ಎನ್ನಿಸಿತಂತೆ.

"ನಾ ಬರುವುದೇತಕ್ಕೆ? ವಿಲಾಸಿನಿಯನ್ನು ನೋಡುವುದಕ್ಕೆ, ಅವ ಳೊಡನಿರುವುದಕ್ಕೆ, ಅವಳೊಡನೆ ಮಾತನಾಡುವುದಕ್ಕೆ. ಏನೂ ಇಲ್ಲದೆ ಭೂತ ಹಿಡಿದ ಪಿಶಾಚಿಯಂತೆ ಈ ಕೋಣೆಯಲ್ಲಿ ಕುಳಿತು ತಿಂಡಿ ತಿಂದು ನಿದ್ದೆಮಾಡುವುದಕ್ಕೇ? ಜೀವಕ್ಕೆ ಉಸಿರು ಹೇಗೋ, ಮಾವನ ಮನೆಗೆ ಹೆಂಡತಿ ಹಾಗೆ. ನಾನು ಹಿಂದೆ ಬಂದು ಬಂದು ಸುಸ್ತು ತಿಂದಿದ್ದರೂ, ತಿರುಗಿ ಏಕೆ ಬರಬೇಕಿತ್ತು? ಮುಖ್ಯ ನನಗೆ ಬುದ್ಧಿ ಇದ್ದರಲ್ಲವೆ!.... ನಾನು ಏಕೆ ಬರುತ್ತೇನೆ ಎನ್ನುವುದು ಆ ಹುಡುಗಿಗೆ ಗೊತ್ತಿಲ್ಲವೆ?

ಗೊತ್ತಿದ್ದರೂ ಸಂಕೋಚ ಎನ್ನೋಣ. ಅನುಭವಸ್ಥರು, ನಮ್ಮ ಅತ್ತೆ ಮಾವ, ಅವರಿಗಾದರೂ 'ಅಳಿಯ ಏಕೆ ಬರುತಾನೆ ಹೀಗೆ ಮೂರು ಮೂರು ದಿನಕ್ಕೊ' ಎಂತ ತೋಚಬೇಡವೆ!....ಶುದ್ಧ ಗೊಡ್ಡುಗಳಪ್ಪ, ಹಳ್ಳಿಯ ಗೊಡ್ಡುಗಳು. ನಾನೂ ಎಷ್ಟೋ ಹಿಂಟ್ (Hint) ಕೊಟ್ಟಿದ್ದೇನೆ... 'ಇವನು ಸರಿಯಾಗಿ ತಿಂಡಿ ತಿನ್ನುವುದಿಲ್ಲ .... ಊಟಮಾಡುವುದಿಲ್ಲ .... ಏನೋ ಬೇಜಾರುಪಟ್ಟುಕೊಂಡಿದ್ದಾನೆ....ಏಕೆ? ಓಹೋ! ವಿಲಾಸಿ ಅವನ ಬಳಿ ಸರಿಯಾಗಿ ಮಾತನಾಡಿ ಓಡಾಡುವುದಿಲ್ಲ; ಅದಕ್ಕೇ!'.... ಇಷ್ಟು ತಿಳಿಯುವುದಿಲ್ಲವಲ್ಲ ಇವರಿಗೆ... ಸಾಲದುವಕ್ಕೆ ಹಿಂದೆ ಒಂದು ಸಲ ಬೇಸಿಗೆ ರಜದಲ್ಲಿ, ನನ್ನ ಮಾವನವರಿಂದ 'ಬಾ' ಎಂದು ಕಾಗದ ಬಂದಿದ್ದರೂ, ವಿಲಾಸಿನಿ ಮೈಸೂರಿನಲ್ಲಿ ಅವಳ ದೊಡ್ಡಪ್ಪನ ಮನೆಯಲ್ಲಿದ್ದುದರಿಂದ, ಮಂಡ್ಯದಲ್ಲಿ ನನಗೇನು ಕೆಲಸ ಅಂತ ಏನೋ ಕುಂಟನೆವ ಹೇಳಿ ಹೋಗದೆ ಇದ್ದದ್ದು ಇವರಿಗೆ ಗೊತ್ತಿದೆ. ಗೊತ್ತಾಗಿಯೂ ಹೀಗೆ ಮಾಡಿದರೆ. ಏನು ಹೇಳೋಣ? ಇದನ್ನೆಲ್ಲಾ 'ನಿಮ್ಮ ಮಗಳು ನನ್ನ ಹತ್ತಿರ ಕುಳಿತುಕೊಂಡು ಮಾತನಾಡುವುದಿಲ್ಲ' ಅಂತ ಬಾಯಿಬಿಟ್ಟು ಹೇಳುವುದಕ್ಕಾಗುತ್ತದೆಯೇ? ನಾಚಿಕೆಗೇಡು! ಅದು ಅವರವರೇ ತಿಳಿದುಕೊಳ್ಳಬೇಕು. 'ಹಿಂದೆ ಬಂದಾಗಲೆಲ್ಲ ಸರಿಯಾಗಿ ಊಟಮಾಡಲಿಲ್ಲ, ತಿಂಡಿ ತಿನ್ನಲಿಲ್ಲ, ಅದೇಕೆ?' ಅಂತ ಕೊಂಚವಾದರೂ ಯೋಚಿಸಲೇ ಬೇಡವೇ?....ನಾನು ಇಲ್ಲಿಗೆ ಬರೀ ತಿಂಡಿಗೆ ಬರುವುದಾದರೆ, ಈ ಮಂಡ್ಯದ ಮಾವನ ಮನೆಗೂ, ನಾನು ಬೆಂಗಳೂರಿನಲ್ಲಿ ದುಡ್ಡು ಕೊಟ್ಟು ಹೋಗುವ ಮಾವನ ಮನೆಗಳಿಗೂ ಏನು ವ್ಯತ್ಯಾಸ?....ನಮ್ಮ ಅತ್ತೆ ಲಕ್ಷಣವಾಗಿ 'ನಮ್ಮ ಅಳಿಯಂದಿರ ರುಚಿ ಗೊತ್ತೇ ಆಗೋಲ್ಲ. ಏನು ಮಾಡಿದರೂ ಹೇಗೆ ಮಾಡಿದರೂ ಇವರಿಗೆ ಸರಿಯೇ ಬೀಳೋಲ್ಲ' ಅಂತ ರಾಗ ಎಳೀತಾರೆ. ಯಾಕೆ ಸರಿಹೋಗಲ್ಲ ಅಂತ ಸ್ವಲ್ಪ ಬುದ್ಧಿ ಉಪಯೋಗಿಸಬಾರದೆ?....ಆ ಹುಡುಗಿ ತಿಂಡಿ ತರುತ್ತಾಳಲ್ಲ—ನಿದಾನವಾಗಿ ಒಂದೆರಡು ನಿಮಿಷ ನಿಲ್ಲುತ್ತಾಳೆಯೆ? ಉಹ್ಞು! ತರುತ್ತಾಳೆ, ಇಡುತ್ತಾಳೆ, ಮಿಂಚಿನಹಾಗೆ ಮರೆಯಾಗುತ್ತಾಳೆ....ಒಂದು ವೇಳೆ ನಿಂತರೂ ಮಾತನಾಡಿಸುವ ಅಂದರೆ, ಸುತ್ತ ಕಾವಲು. ಅವರೆದುರಿಗೆ ಮಾತನಾಡುವು

ದಕ್ಕುಂಟೆ? ಆಡಿದರೆ ತಾನೆ ನನಗೆ ಮಾನ ಉಳಿಯುತ್ತದೆಯೆ?....ಮುಖ್ಯ ನಾನು ಮಾಡಿದ್ದು ತಪ್ಪು ಕೆಲಸ. ಮದುವೆಗೆ ಮುಂಚೆ ಯಾರು ಯಾರೋ ಹೇಳಿದರು: 'ಲೋ! ಕಟ್ಟಿಕೊಳ್ಳೋದು ಕಟ್ಟಿಕೊಂಡೂ ಆ ಹಳ್ಳಿಯದನ್ನ ಯಾಕೊ ಕಟ್ಟಿಕೊಳ್ಳುತ್ತೀಯೆ?' ಎಂದು. ಅವರ ಮಾತು ಕೇಳ ಬೇಕಾಗಿತ್ತು. ಹಿತಕ್ಕಾಗಿ ಹೇಳಿದವರು ಹೊಡೆದು ಹೇಳಿದರು ಎನ್ನುವ ಹಾಗೆ ...ಮದುವೆ ಮಾಡಿಕೊಳ್ಳಬಾರದಾಗಿತ್ತು. ಮಾಡಿಕೊಂಡದ್ದು ತಪ್ಪು. ಅಳಿಯತನದ ಗೌರವ ಹೋಗುತ್ತೆ....ದೂರ ಇದ್ದಷ್ಟೂ ಮರ್ಯಾದೆ ಹೆಚ್ಚು ....ನನಗೂ ಸುಖ....ಬಂದ ತಪ್ಪಿಗೆ ಬೆಳಗಿನ ವರಿವಿಗೂ ಇದ್ದು ಬಿಟ್ಟು, ಬೆಳಗ್ಗೆ ಮೈಸೂರಿಗೆ ಹೋಗುವ ನೆಪ ಹಾಕಿಕೊಂಡು, ಬೆಂಗಳೂರಿನಲ್ಲಿ ಗೂಡು ಸೇರಿಕೊಂಡರೆ, ಈ ಹೊಟ್ಟೆಗಿಲ್ಲದೆ ಒದ್ದಾಡಿ ಸಾಯುವ ಅವಸ್ಥೆ ತಪ್ಪುತ್ತೆ...."

—ಎಂದು ಶಾಮಿ ತನ್ನಷ್ಟಕ್ಕೆ ತಾನೇ ಒದ್ದಾಡಿಹೋದನಂತೆ.

ಅಷ್ಟರಲ್ಲಿ ಅವನ ಅತ್ತೆಯವರು ಬಂದು ಮಾತನಾಡಿಸಿದರಂತೆ. ಅವರನ್ನು ನೋಡಿದ ಮೇಲೆಯೂ ಸಿಡುಕಲು ಸೋರೆಯುಂಟೆ? ಅವರನ್ನು ನೋಡಿದರೆ, ಶಾಮಿಗೆ ಎಳೆತನದಲ್ಲಿ ಕಳೆದುಕೊಂಡ ತನ್ನ ತಾಯಿಯ ನೆನಪುಂಟಾಗುತ್ತಂತೆ. ಅದೇ ಮಾಧುರ್ಯ, ನಡೆನುಡಿಗಳಲ್ಲಿ ಅದೇ ಮಮತೆ. ತತ್ಕ್ಷಣ ನಗುಮುಖ ಮಾಡಿಕೊಂಡನಂತೆ. ಪರಸ್ಪರ ಕುಶಲ ಪ್ರಶ್ನೆಗಳಾಗುತ್ತಿರುವಲ್ಲಿ ಒಳಗಿಂದ 'ಅಮ್ಮಾ!' ಎಂಬ ದನಿ ಕೇಳಿಸಿತಂತೆ. ಮೈ ಜುಮ್ಮೆಂದಿತಂತೆ! ಸುಣ್ಣ ತೊಡೆದ ಗೋಡೆಯನ್ನು ಉದ್ದವಾದ ಉಗುರಿನಿಂದ ಕೆರೆಯುತ್ತಿದ್ದರೆ ಹೇಗಾಗುವುದೋ ಹಾಗಾಯಿತಂತೆ. ವಿಲಾಸಿಯ ದನಿಯಂತೆ! ಶಾಮಿಯ ಅಸಮಾಧಾನವೆಲ್ಲ ಉಷೆಯೆದುರಿನ ನಿಶಿಯಂತೆ ಮರೆಯಾಯಿತಂತೆ! ಊರಿಗೆ ಹೋಗಬೇಕೆಂದಿದ್ದ ಯೋಚನೆ ಕಾಡಿಗೆ ಓಡಿಹೋಯಿತಂತೆ!

* * *

ಈಗ ನಾನು ಹೇಳುವುದು: ನಮ್ಮ ಶಾಮಿ–ಅವನ ವಿಲಾಸಿ ಅನ್ನೋ ಅಭಿಮಾನದಿಂದ ಹೇಳುವ ಮಾತಲ್ಲ. ಯಾರಾದರೂ ಓದಿದವರು 'ಸರಿ; ಕಡೆಗೆ ಏನಪ್ಪ– ಏನು ಬೇಕಾದರೂ ಹೇಳಬಹುದು!' ಎಂದರೆ, ಅವರಿಗೆ

ನಾನು ಹೇಳುವುದೊಂದು. ಒಂದೇ ಪ್ರಕೃತಿಯನ್ನ ಮಂದಿಯೂ ನೋಡು ತ್ತಾರೆ, ಒಬ್ಬ ಕವಿಯೂ ನೋಡುತ್ತಾನೆ. ಆದರೆ ಕವಿಗೆ ಕಾಣುವ ಸೂಕ್ಷ್ಮಾಂಶಗಳು, ಸೌಂದರ್ಯಾತಿಶಯಗಳು ಇತರರ ಕಂಗಳಿಗೆ ಅಗೋಚರ. ಹಾಗೆಯೇ ಒಂದೇ ವ್ಯಕ್ತಿಯನ್ನು ಕೂರ್ತವರು ನೋಡುವು ದಕ್ಕೂ ಸಾಮಾನ್ಯರು ನೋಡುವುದಕ್ಕೂ ಅನಂತವಾದ ಅಂತರವಿದೆ.

ನಮ್ಮ ಶಾಮಿ ತನ್ನ ಡೈರೀಲಿ ಬರೆದಿಟ್ಟಿದ್ದ ಹಾಗೆ: "ನನ್ನ ವಿಲಾಸಿ ನನ್ನಷ್ಟೇ ಎತ್ತರವಿದ್ದರೂ, ಎತ್ತರಕ್ಕೆ ಸಮವಾದ ಗಾತ್ರ. ಲಾವಣ್ಯ ಲೇಪನವ ಪೂಸಿದ ಸುಧಾಕರನಂತಿರುವಳವಳು. ಕಾಂತಿಕಡಲೊಳು ಮಿಂದು ಹೊರಬಂದ ಸೂರಿಯನ ಸಮನಿಸುತ ಶೋಭಿಪಳು ಎನ್ನ ಲಲನೆ. ವಯೋನುಗುಣವಾಗಿ ಬಳೆದ ಸುಕುಮಾರ ದೇಹ. ಮುದ್ದಾದ ಮುಖ. ಚೆಲುವಾದ ಗಲ್ಲ. ಅವಳ ಕಂಗಳ ಕಾಂತಿ ಕಣ್ಣುಕೋರಯಿಪ ಸೆಳೆಮಿಂಚಿ ನಂತಲ್ಲ; ರಮ್ಯಾರುಣೋದಯದ ಸಮಯದಲಿ, ಇನನ ಬರವನು ಕಂಡು, ದಳದ ಕದಗಳ ತೆಗೆದು, ಹೊರಗಿಣಿಕಿ ನೋಡುವಾ ವನಸುಮದ ಸೊಬಗು. ನೋಡಿದಷ್ಟೂ ಇನ್ನೂ ನೋಡಬೇಕೆನ್ನಿಸುವುದು. ಅವಳು ನಕ್ಕಳೆನೆ, ಹೊಳೆವ ಹಲ್ಲಿನ ಕಾಂತಿ, ದನಿಯ ಆ ಮಾಧುರ್ಯ, ಎಳನಗೆಯ ಲಾವಣ್ಯ, ಕಂಗಳ ಚೆಲುವು, ಮುಖದ ಅವುದೋ ನೈಜವಾದ ಅನಿರ್ವಚ ನೀಯ ಸೌಂದರ್ಯ, ಇವೆಲ್ಲ ಸಮರಸವಾಗಿ ಕಲೆತು, ಅವಳ ಮುಖ ಎಳನೇಸರಂತೆ ಸತ್ವಸಾರಗುಣಪೂರ್ಣವಾಗುತ್ತದೆ. ಅವಳು ಹೆಜ್ಜೆಯಿಟ್ಟರೆ ಸಾಕು--ಕಾಲುಗೆಜ್ಜೆಯ ಸರವು ಮನವ ಮೋಹಿಸಿ ಸೆಳೆಯುತ್ತದೆ...."

ಹೇಳಲಿಲ್ಲವೆ—ಇದು ಕೂರ್ತವರ ಕಣ್ಣಿನ ಬಣ್ಣನೆಯೆಂದು!

ಹೀಗೆಷ್ಟು ಹೊತ್ತು ತನ್ನ ಆರಾಧನೆಯ ಮೂರ್ತಿಯನ್ನು ನೆನೆ ಯುತ್ತಿದ್ದನೋ ಅರಿಯೆ. ಶಾಮಿಯ ಪಟ್ಟಿಗೆ ಅವಳ 'ಅಮ್ಮಾ! ಎಂಬ ಶಬ್ದವೊಂದರಲ್ಲಿ ಓಂಕಾರದ ಸತ್ವವೆಲ್ಲ ಅಡಗಿತ್ತೆಂದು ತೋರುತ್ತದೆ.

ತಲೆಯೆತ್ತಿ ನೋಡಿನರೆ, ಎದುರಿನಲ್ಲಿ ಪ್ರತ್ಯಕ್ಷ ಮೂರ್ತಿ--ಅವನ ವಿಲಾಸ! ತಟ್ಟೆ ಲೋಟ ಹಿಡಿದು ನಿಂತಿದ್ದಾಳೆ! ತಟ್ಟೆಯಲ್ಲಿ ದೋಸೆ; ಲೋಟದಲ್ಲಿ ಹಾಲು. ಶಾಮಿ ಮುಖ ನೋಡಿದನೋ ಇಲ್ಲವೊ - ನಾಚಿ ಕೊಂಡಕೆಂದು ತೋರುತ್ತೆ -ತಂದಿದ್ದುದನ್ನು ಮೇಜಿನ ಮೇಲಿಟ್ಟು,

ಹೊರಡಲನುವಾದಳಂತೆ. 'ಇನ್ನು ಬಿಟ್ಟರೆ ಸಿಕ್ಕಳು. ಸಾಲದ್ದಕ್ಕೆ ಜತೆಗಾರರೂ ಇಲ್ಲ. ಈಗಲೇ ನಿಲ್ಲಿಸಿ ಮಾತನಾಡಿಸಬೇಕು. ಇನ್ನೆಲ್ಲಿ ಹಾರಿ ಹೋಗುವಳೋ' ಎಂಬ ಭಯದಿಂದ, ಅವಳು ಹೊರಡುವುದಕ್ಕೆಂದು ಹೆಜ್ಜೆ ಮುಂದಿಟ್ಟಾಗ, ಅವಳ ರಟ್ಟೆ ಹಿಡಿದುಕೊಂಡನಂತೆ.

"ಹಾ! ನೋಯುತ್ತೆ!" ಎಂದಳಂತೆ.

ಮುಳ್ಳು ತುಳಿದಂತಾಗಿ, ಕೈ ಸಡಿಲಿಸಿ ನೋಡಿದರೆ, ಅವಳ ಕೇದಗೆ ರಾಗದ ತೋಳಿನ ಮೇಲೆ ಕೆಂಪಗೆ ಬರೆಯೆಳೆದಂತೆ ಇವನ ಕೈಯ ಐದು ಬೆರಳುಗಳ ಗುರುತು ಇತ್ತಂತೆ.

ವಿಲಾಸಿನಿಯ ಕಣ್ಣಿನಲ್ಲಿ ನೀರು ತುಂಬಿಕೊಂಡಿತ್ತಂತೆ. ಬಹಳ ನೋವಾಗಿದ್ದಿರಬೇಕು. "ನನ್ನ ರಾಕ್ಷಸೀ ವರ್ತನೆಯಿಂದ ನನಗೇ ನಾಚಿಕೆಯಾಯಿತು." ಎಂದ ಶಾಮಿ, ಆಮೇಲೆ.

"ವಿಲೂ! ನೋವಾಯಿತೆ?" ಎಂದನಂತೆ.

ವಿಲಾಸಿನಿ ನೆಲ ನೋಡುತ್ತ ಸುಮ್ಮನಿದ್ದಳಂತೆ.

"ನೋಡು ...ನಿನ್ನ ಕೂಡ ಮಾತಾಡಬೇಕೆಂದು....ಬಹಳ ಆಸೆ.... ಇವತ್ತು....ನಿಲ್ಲಿಸಿಕೊಳ್ಳೋಣ....ಇಲ್ಲದಿದ್ದರೆ ಓಡಿ ಹೋಗುತಾಳೆ . ಎಂತ ನಿಲ್ಲಿಸಿಕೊಂಡೆ....ಪಾಪ! .... ನೋವಾಯಿತೆ? .... ನೋವುಮಾಡಬೇಕು ಅಂತ ಹಾಗೆ ಹಿಡೀಲಿಲ್ಲ...." ಎಂದನಂತೆ. ಮಾಡಬಾರದ್ದನ್ನು ಮಾಡಿದವನಂತಿತ್ತು ಅವನ ಸ್ಥಿತಿ.

ವಿಲಾಸಿನಿ ಎರಡು ಮೂರು ಸಲ ಉಗುಳು ನುಂಗಿ, ನೋಟ ಕೆಳಗಿದ್ದಂತೆಯೆ "ನೀವೇ .... ನಿಂತುಕೋ ಎಂದಿದ್ದರೆ .... ನಿಲ್ಲುತ್ತಿದ್ದೆ ...." ಎಂದಳಂತೆ.

ಮುಳುಗುವವನಿಗೆ ಮುರುಕು ದೋಣಿ ದೊರೆತಂತಾಗಿ "ಹಾಗಾದರೆ ....ಈಗ ನಿಲ್ಲುತೀಯ?" ಎಂದನಂತೆ. ಅವನ ಕಣ್ಣೊಡೆದು ಬರುತ್ತಿತ್ತಂತೆ ಒಳಗಿನ ಆಸೆ.

"ನಿಲ್ಲು ಅಂತ ನೀವು ಹೇಳಿದರೆ...."

"ನಿಂತು....ನಿಂತು ...ನನ್ನ ಜತೇಲೆ ತಿಂಡಿ ತೆಗೆದುಕೊಳ್ಳುತ್ತೀಯ?"

ಮನುಷ್ಯನಿಗೆ ಅತಿ ಆಸೆ!

"ನೀವು ಕೊಟ್ಟರೆ....ಬೇಡ ಎನ್ನಲೆ?"

ಅದೇನೊ ಸ್ವರ್ಗ ಅಂತಂತಾರಲ್ಲ— ಅಲ್ಲಿಗೂ ಅವನಿಗೂ ಅರ್ಧ ಹಂಚಿಕಡ್ಡಿ ದಾಯ....ಅಂತೆ....

"ಆ ಬಾಗಿಲು ಮುಚ್ಚಿ ಬಾ, ಹಾಗಾದರೆ."

ವಿಲಾಸಿನಿ ಬಾಗಿಲಿಕ್ಕಿ, ಸೆರಗು ಸರಿಪಡಿಸಿಕೊಂಡು, ಹತ್ತಿರ ಬಂದು ನಿಂತುಕೊಂಡಳು. 'ಕುಳಿತುಕೋ' ಎಂದ. ಬಹು ಸಂಕೋಚದಿಂದ ಸೀರೆ ಮುದುರಿಕೊಂಡು ಪಕ್ಕದಲ್ಲಿ ಕುಳಿತವಳು ಹತ್ತಿರಕ್ಕೆ ಸರಿದುಬಂದಳು. ಸಾಮಿಪ್ಯದಿಂದ ಸಂಕೋಚ ತೊಲಗಿ ಸಲುಗೆಯುಂಟಾಯಿತಂತೆ.

ಅವಳ ಕಣ್ಣಿನಲ್ಲಿ ನೀರು ಹಾಗೇ ಇತ್ತಂತೆ. "ನೋಡು! ಕಣ್ಣೀರು ಇನ್ನೂ ಹಾಗೆಯೇ ಇದೆಯಲ್ಲ. ಎಲ್ಲಿ!" ಎಂದು ಅವಳ ಕಣ್ಣು ಒರೆಸುವುದಕ್ಕೆ ಹೋದಾಗ, ಅವನ ಕೈಗವಳ ಕೆನ್ನೆ ಸೋಕಿತಂತೆ. ಹೊಸ ಹೂಗಳ ಬುಟ್ಟಿಯಲ್ಲಿ ಕೈಯಿಟ್ಟಹಾಗಾಯಿತಂತೆ!

ಈ ನೂತನ ಅನುಭವದ ಸಲುವು ಅವಳ ಮುಖ ನೋಡಿದ. ವಿಲಾಸಿನಿ ಲಜ್ಜೆಯಿಂದ ತಲೆಬಾಗಿಸಿದಳು. ಅವಳ ಮುಖ ಆರಕ್ತವಾಯಿತು! ಜ್ಯೋತಿಗೆ ಜ್ಯೋತಿ ಬೆರೆತಂತಾಯಿತಂತೆ. ಕೊರಲೊಂದು ಕಡೆ ಕೊಂಕಿಸಿ, ನೆಲ ನೋಡುತ್ತ ಕುಳಿತಿದ್ದಳಂತೆ. ಅವಳ ಕೆಂಪಾದ ಬೆವರಿರುವ ಮುಖವನ್ನೂ, ಮುಖಕ್ಕಿಂತ ಕೆಂಪಾದ ತುಟಿಗಳನ್ನೂ, ತೆಳ್ಳಗೆ ಬೆಚ್ಚಿರುವ ಅರಿಸಿನದಿಂದಲಂಕೃತವಾದ ಅರ್ಧ ವೃತ್ತಾಕಾರದ ಹೊಂಬಣ್ಣದ ಕೆನ್ನೆಗಳನ್ನೂ, ಮುಖಕ್ಕೆ ಸಿಂಗರಿಸಲು ಕಟ್ಟಿದ ಕುಚ್ಚುಗಳಂತಿದ್ದ ಉಂಗುರ ಕುರುಳುಗಳನ್ನೂ ನೋಡಿದನಂತೆ. ಕಿಟಕಿಯಿಂದ ಹರಿದು ಬರುತ್ತಿದ್ದ ಸಂಧ್ಯಾಸೂರ್ಯನ ಬೆಳಕು ಅವಳ ಮುಖದ ಮೇಲೆ ಬಿದ್ದು ಚಿನ್ನಕ್ಕೆ ಪುಟವಿಟ್ಟಹಾಗೆ ಇತ್ತಂತೆ.

ಹೀಗೆಷ್ಟು ನೋಡಿದರೂ, ನೋಡಿ ನೋಡಿ ತಣಿಯದೆ, ಏನನ್ನೋ ಭಾವಿಸಿ, "ವಿಲಾಸಿ!" ಎಂದನಂತೆ.

ಸಂಜೆವೆಣ್ಣು ಮರೆಯಾಗುತ್ತಿರುವಾಗ, ನೀಲದೆಡೆಯಲ್ಲಿ, ಮೋಡದ ಅಂಚಿನ ಮರೆಯಿಂದ ಹೊರಗೆ ತಲೆಹಾಕಿ ನೋಡುವ ಚುಕ್ಕಿಯ ಹಾಗೆ, ವಿಲಾಸಿನಿ ಮೆಲ್ಲಗೆ ತಲೆಯೆತ್ತಿ, "ಏನು?" ಎಂದಳಂತೆ.

ಅವನ ಕೈಲಿದ್ದ ದೋಸೆಯ ಚೂರು ತಟ್ಟೆಯೊಳಗೆ ಬಿತ್ತಂತೆ. ಬಾಗಿಲ ಕಡೆ ನೋಡಿದನಂತೆ. ಬಾಗಿಲು ಹಾಕಿತ್ತಂತೆ.

"ವಿಲಿ! ದೇವಸ್ಥಾನದಲ್ಲಿ ದೇವರಿಗೆ ಹಣ್ಣುಕಾಯಿ ಒಪ್ಪಿಸಬೇಕಾದರೆ ಏನು ಮಾಡುತ್ತಾರೆ?"

"ಏನು ಮಾಡುತ್ತಾರೆ?"

"ಏನು ಮಾಡುತ್ತಾರೆ? ಹೇಳು."

"......................."

"ಪೂಜೆ ಮಾಡುವುದಕ್ಕೆ ಕಾಣಿಕೆ ಕೊಡುತ್ತಾರಷ್ಟೆ?"

"ಹೌದು, ಕೊಡುತ್ತಾರೆ."

"ಕೊಡುತ್ತಾರೆ. ಸರಿ. ಈಗ....ನೋಡು....ನೀನು ತಂದಿರುವ ಈ ದೋಸೆ ಹಾಲು ನಾನು ತೆಗೆದುಕೊಳ್ಳಬೇಕಾದರೆ ನೀನು ನನಗೆ ಕಾಣಿಕೆ ಕೊಡಬೇಕು."

ವಿಲಾಸಿ ತಲೆ ತಗ್ಗಿಸಿದವಳು, ಮರುನಿಮಿಷದಲ್ಲಿಯೇ ಅವನ ಕಡೆ ನೋಡಿ, 'ಆಗಬಹುದು' ಎಂಬಂತೆ ಮುಖ ಮಾಡಿದಳಂತೆ.

ಈ ಬಾರಿ ತೋಳು ಸೆಳೆದುದಕ್ಕೆ ಉಸಿರೆತ್ತಲಿಲ್ಲ. ಉಷೆಯಲ್ಲಿ, ಮೇಲೆ ನಿಂತಿರುವ ಹಿಮಕಣಗಳು ಇಂಗಿ, ಸೂರ್ಯಕಿರಣದ ಸ್ಪರ್ಶದಿಂದ ಸುಖೋಷ್ಣತೆಯಾಂತ ಪಾರಿಜಾತ ಪುಷ್ಪಗಳ ದಂಡೆ ತುಟಿಗಳಿಗೆ ಸೋಕಿದಂತಾಯಿತಂತೆ. ಕಣ್ಮುಚ್ಚಿದನಂತೆ. ಕಣ್ತೆರೆದು ನೋಡುವನೇ, ಅವನ ತೆಕ್ಕೆಯಲ್ಲಿ ಇದ್ದಳಂತೆ ಅವನ ನಲ್ಲೆ! ಅವನ ಹಿಗ್ಗೋ—ಹಿಡಿಯುತೀರದಂತೆ!

ಅವಳೇ ಕೊನೆಗೆ "ಹಿಂದೆ ಬಂದಾಗಲೆಲ್ಲ ಉಪ್ಪಂತ ಗಡಿಗೆ ಮುಖ ಮಾಡಿಕೊಂಡಿದ್ದವರಿಗೆ ಈ ಸಲ ಏನು ಇಷ್ಟು ಸುಪ್ರ್ಮಾನ?" ಎಂದಳಂತೆ.

"ನಿನ್ನ ಹತ್ತಿರ ಮಾತನಾಡಿ ಕಾಣಿಕೆ ವಸೂಲು ಮಾಡುವುದಕ್ಕೆ ಇಷ್ಟು ಹೆಣಗಾಡಬೇಕಾಯಿತು."

"ಅಬ್ಬಾ! ಅದಕ್ಕೆ ಇಷ್ಟು ಆಟವೆ? ಯಾಕಪ್ಪಾ ಇವರು ಹೀಗೆ ಎಂತಿದ್ದೆವು ನಾವೆಲ್ಲ! ಈ ಕಾಣಿಕೆ ನಿಮಗಲ್ಲದೆ ಇನ್ಯಾರಿಗೆ? ಮೊದಲೇ ಬಾಯಿಬಿಟ್ಟು ಕೇಳಿದ್ದರೆ ..."

"ಓಹೋ! ಕೇಳಬೇಕಾಗಿತ್ತೇನೋ!"

"ಇಲ್ಲ ಮತ್ತೆ! ಗೊತ್ತಿಲ್ಲವೆ ನಿಮಗೆ? ಮೇಲೆ ಬಂದು ಬಿದ್ದ.... ಗೊತ್ತಿದೆ ತಾನೆ?"

"ಗೊತ್ತಿದೆ."

* * *

ರಾತ್ರಿ ಅಡುಗೆಯ ಮನೆಯಲ್ಲಿ ಅವನ ಅತ್ತೆ ಅವನ ಮಾವನವರ ಹತ್ತಿರ ಹೇಳುತ್ತಿದ್ದರಂತೆ: "ಅಲ್ಲ ಅಂದ್ರೆ. ನನಗಿಷ್ಟು ತಿಳಿಯಲಿಲ್ಲವಲ್ಲ. ಸಾರ್ಥಕವಾಯ್ತು—ನಾನೂ ಮಕ್ಕಳನ್ನು ಹೊತ್ತು ಹೆತ್ತು ಸಾಕಿದ್ದಕ್ಕೆ. ಇದುವರಿವಿಗೆ ನನಗೆ ತೋಚಲೇ ಇಲ್ಲವಲ್ಲ—ಏಕೆ ಇವರು ಹೀಗೆ ಮಾಡ್ತಾರೆ ಅಂತ. ಅಯ್ಯೋ ನನ್ನ ಬುದ್ಧೀನೇ...."

"ನಿನಗೆ ಮುಂಚೆ ಬುದ್ಧಿಯಿದ್ದರಲ್ಲವೆ, ನೀನು 'ಅಯ್ಯೋ ನನ್ನ ಬುದ್ಧೀನೆ' ಅಂತ ರಾಗ ಎಳೆಯುವುದಕ್ಕೆ!" ಎಂದ ಹಾಗಿತ್ತಂತೆ ಅವನ ಮಾವನವರು.

# ಒಲವೋ ? ಕುಲವೋ ?

---

ಶಠಗೋಪ ಹದಿನಾರಾಣೆ ಶ್ರೀವೈಷ್ಣವ.

ಒಂದು ದಿನ ಅವನ ಅತ್ತಿಗೆ ಅಡುಗೆಯ ಕೆಲಸದಲ್ಲಿದ್ದಾಗ ವೀಳೆಯ ದೆಲೆಯ ವರ್ತನೆಯವಳು ಬಂದರೆ, ಎಲೆ ತೆಗೆಯಲು ಶಠಗೋಪನಿಗೆ ಹೇಳಿ ದಳು. ಶಠಗೋಪ ಹೊರಗೆ ಬಂದು, ಎದುರಿಗಿದ್ದ ವೀಳೆಯದೆಲೆಯವ ಳನ್ನು ನೋಡಿದ.

ಅವಳು ಸಾಧಾರಣವ ಹೆಣ್ಣು. ರತಿಯಲ್ಲ, ಚಪ್ಪನ್ನಾರು ದೇಶ ದಲ್ಲಿಯೂ ಸಿಗದಂಥ ಚೆಲುವೆಯಲ್ಲ. ಸುಮಾರು ಎತ್ತರದ ಎಣ್ಣೆಗೆಂಪಿನ ಹೆಣ್ಣು. ಧೂಳು ಹತ್ತಿದ ಸೀರೆ ..ಕಟಿಯಲ್ಲಿ ಎಲೆಯ ಹೆಡಿಗೆ....ಕೈಗೆ ಬೆಳ್ಳಿಯ ಕಡಗ....ಕತ್ತಿನಲ್ಲಿ ಕರಿಮಣಿ, ಹವಳ....ಕಿವಿಯಲ್ಲಿ ಬೆಂಡೋಲೆ ....ತೈಲ ಹಚ್ಚಿದ ತಲೆಗೂದಲು....ತುರುಬಿನ ತುಂಬ ಹೂವು ... ನಗುಮುಖ ದಲ್ಲಿ ಮೂರು ಕಾಸಿನಷ್ಟಗಲ ಕುಂಕುಮದ ಒಟ್ಟು....ಸಂಜೆಗೆಂಪನ್ನು ಎರ ಚುವ ತಂಬುಲದ ತುಟಿ . ಹದಿನೇಳರ ಪ್ರಾಯವಿರಬಹುದು....ಎಲ್ಲಕ್ಕೂ ಮೇಲಾಗಿ ಮುಖದ ತುಂಬ ಎರಡು ಕಣ್ಣು....ಕ್ಷಣರುಚಿಯ ಕಿಡಿಯೆರಡು ಚಿರರುಚಿಗಳಾದಂಥ ಕಣ್ಣು ...ಹೃದಯದ ಆಳವನ್ನು ತಿಳಿಯಲು ನೆರ ವಾಗುವ ಕಣ್ಣು....

ವೀಳೆಯದೆಲೆಯವಳು— ಅವಳ ಹೆಸರು ರತ್ನಿ — ಎಲೆಯಿಡುತ್ತಾ ತಲೆ ಯೆತ್ತಿದಳು.

ಎದುರಿನಲ್ಲಿ ಕಡೆದ ಕೃಷ್ಣಕಾಯದ ಶಠಗೋಪ! ನೀರು ಕಾರುವ ಊಟೆಯಂತೆ ತೇಜಸ್ಸು ಕಾರುವ ಗುಂಡುಮುಖದಲ್ಲಿ ಎತ್ತಿಕಾಣುವ ಬಿಳಿಯ ತಿರುಮಣ್ಣು, ಹಳದಿಯ ಶ್ರೀಚರಣ ...ಗರಿ ಹಿಡಿದು ಲುಂಗಿ ಸುತ್ತಿದ ಬೆಳ್ಳನೆಯ ಅಗಲದಂಚಿನ ಪಂಚೆ....ಎದೆ ಮೇಲೆ ಮಲಗಿರುವ ಮೂರೆಳೆಯ ಜನಿವಾರ....ತಲೆಯ ತುದಿಯಲ್ಲಿ ಕುಳಿತ ಸಣ್ಣ ಕುಡಿಮಿ.... ಎಲ್ಲಕ್ಕೂ ಮೇಲಾಗಿ, ಇರುಳ ನೆರಳಿನ ಕೆಳಗೆ ಹೊಳೆಯುವ ಎರಡು ಶುಕ್ರ

ಗ್ರಹಗಳೆಂಬ ಭ್ರಾಂತಿಯನ್ನುಂಟುಮಾಡುವ ಕಣ್ಣುಗಳು....ಎದೆಯೊಲವಿನ ಹೊನಲುಕ್ಕಿ ಕೋಡಿಹರಿದು ಹೊರಬರುವ ತೂಬುಗಳು....

ಒಬ್ಬರನ್ನೊಬ್ಬರು ನೋಡಿದರು. ಒಬ್ಬರಿಗೊಬ್ಬರು ಮನಸ್ಸಿತ್ತರು.

'ಶ್ರೀನಿವಾಸ'ರು ಒಂದು ಕಡೆ ಹಾಡಿದ್ದಾರೆ:

"ಆಗಸದ ವಾಯುಮಂಡಲದ ರಾಜರ ತೆರದೆ
ಗೃಧ್ರಗಳು ಗರಿಹರಡಿ ಹಾರುತಿರುವುದ ನೀವು
ನೋಡಿರುವಿರೋ? ಹೆಣ್ಣು ಗಂಡು ಗರಿಯನು ಹರಡಿ
ಮೇಲು ಮೇಲಕೆ ಇನ್ನು ಮೇಲ್ಗಡೆಗೆ ಹಾರುವುವು;
ಒಂದರೊಡನೊಂದು ಮಾತಾಡುವುವೆ? ಸನ್ನೆಯಲಿ
ಆಸೆಯನು ತೋರುವುವೆ? ಒಮ್ಮೊಮ್ಮೆ ಒಂದೊಂದು
ನೀಳವಾಗಿಹ ತಮ್ಮ ಸೀಳುದನಿಯಲಿ ಕೂಗಿ
ಏರಿದೆವು ಎಂದು ಜಯಘೋಷವನು ಹಾಕುವುವು;
ಇದ ನೀವು ನೋಡುವಿರಿ ಕೇಳುವಿರಿ; ಆ ಮಧ್ಯೆ
ಗಂಡು ಹೆಣ್ಣಿಗೆ ಮೋಡದಿಂದ ಮೋಡಕೆ ಹರಿವ
ತೆಳುಮಿಂಚ ಕಿಡಿಯಂತೆ ಮನದಾಸೆ ಹರಿಯುವುದ
ನೋಡಿರುವಿರಾ? ಮಧ್ಯೆ ಹಾರುವುದ ನಿಲ್ಲಿಸುತೆ
ಅವು ಎರಡು ಒಂದು ಪೆರ್ಮರನ ತಲೆಮೇಲಿಳಿದು
ಕೆಳೆಯ ಬೆಳೆಸುವುವು; ಇದು ದೇವದೇವನ ಮಾಯೆ"

ಶಠಗೋಪ ರತಿನಿಯರು ಒಬ್ಬರಿಗೊಬ್ಬರು ಮನಸೋತದ್ದೂ ದೇವದೇವನ ಮಾಯೆ, ಎನ್ನಬಹುದು.

ತಿಂಗಳಾಗುವುದರೊಳಗೆ ಕೊಂಚಕೊಂಚವಾಗಿ ರತಿನಿಯ ಪೂರ್ವೋತ್ತರವೆಲ್ಲವನ್ನೂ ಶಠಗೋಪ ಕೇಳಿ ತಿಳಿದನು. ಹೊಲೆಯರ ಹೆಣ್ಣುಮಗಳವಳು. ತಂದೆತಾಯಿಗಳನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡಿದ್ದಳಂತೆ. ಆಗಿನಿಂದ ಊರ ಹೊರಗಿನ ತೋಟದಿಂದ ಎಲೆ ತಂದು ಮಾರಿ, ಅದರಿಂದ ಜೀವನ ಜರುಗಿಸುತ್ತಿದ್ದಳಂತೆ. ಪ್ರಪಂಚದಲ್ಲಿ ಅವಳವರು ಎನ್ನುವ ಯಾರೂ ಇರಲಿಲ್ಲವಂತೆ.

ಶಠಗೋಪ ತನ್ನ ವಿಷಯಕವಾದುವನ್ನು ಅವಳಿಗೂ ಹೇಳಿದ. ಶಠಗೋಪನೂ ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡಿದ್ದನು. ಈಗ ಅವನ ಅಣ್ಣ ರಾಮಾನುಜನೇ ತಂದೆ, ಅವನ ಅತ್ತಿಗೆಯೇ ತಾಯಿ. ಶಠಗೋಪ ಸಂಸ್ಕೃತ ಅಭ್ಯಾಸಮಾಡಿ, ಮೇಲೆ ಪೌರೋಹಿತ್ಯಕ್ಕೆ ಬೇಕಾದ್ದನ್ನು ಕಲಿಯುತ್ತಿದ್ದ.

ಒಬ್ಬರನ್ನೊಬ್ಬರು ಅರಿತು ಎರಡು ಮನಸ್ಸೂ ಒಂದಾಗಿತ್ತು.

* * *

ಎರಡು ತಿಂಗಳು ತಳ್ಳಿತು.

ಒಂದು ದಿನ: ರಾಮಾನುಜ ತನ್ನ ತಮ್ಮನಿಗೆ ಬುದ್ಧಿವಾದ ಹೇಳಲು ಮೊದಲುಮಾಡಿ ಮೂರು ಗಂಟೆಯಾಗಿತ್ತು. ಶಠಗೋಪ ರತಿಸಿಯರು ಒಟ್ಟಿಗೆ ಮಾತನಾಡುತ್ತಿದ್ದ ಸುದ್ದಿ ಊರಲ್ಲೆಲ್ಲ ಹಬ್ಬಿತ್ತು. ಶಠಗೋಪನ ಮೇಲೆ ಕಲಂಕದ ಹೊರೆ ಹೇರಿತ್ತು.

"....ಶಠಗೋಪ! ನಮ್ಮ ವಂಶದ ಹೆಸರನ್ನು ಹೀಗೆ ಕೆಡಿಸಬಹುದೆ? ಘನಪಾಟಿ ಶ್ರೀರಂಗಾಚಾರ್ಯರ ಮಗನಾಗಿ ಹೀಗೆ ಮಾಡಬಹುದೆ? ನೀನು ಉತ್ತಮ ಕುಲದವನು—ಅವಳು ಹೊಲೆಯರವಳು. ಅವಳಿಗೂ ನಿನಗೂ ಎಂತಹ ಪ್ರೀತಿ? ಈಗ ಇಪ್ಪತ್ತು ವರುಷಗಳ ಕೆಳಗೆ ತೀರ್ಥರೂಪರವರೂ ತಾಯಿಯವರೂ ತೀರಿಹೋದಾಗ ನೀನಿನ್ನೂ ಅರಿಯದವನು. ಚಿಕ್ಕವನಾಗಿದ್ದ ನಿನ್ನನ್ನು ಇಷ್ಟುದಿನ ಸಾಕಿ ದೊಡ್ಡವನನ್ನಾಗಿ ಮಾಡಿದ್ದಕ್ಕೆ ಇದೇಯೆ ನೀನು ಮಾಡುವ ಕೆಲಸ? ಊರಿನವನೆದುರಿನಲ್ಲಿ ನಾನು ತಲೆ ತಗ್ಗಿಸಬೇಕಾಗಿದೆಯಲ್ಲ, ಶಠಗೋಪ! ನೀನಿನ್ನೂ ಚಿಕ್ಕವನು—ನಿನಗೆ ಯಾರೋ ಈ ಕೆಟ್ಟಕಾರ್ಯಕ್ಕೆ ಹೋಗುವಂತೆ ಹೇಳಿಕೊಟ್ಟಿರಬೇಕು...."

ಶಠಗೋಪ ಅಣ್ಣನ ಬಾಯಿಂದ ಅಂಥ ನೊಂದ ನುಡಿಗಳನ್ನು ಎಂದೂ ಕೇಳಿರಲಿಲ್ಲ. ಅಂದು ಕೇಳಿ ಅವನ ಕಣ್ಣಿನಲ್ಲಿ ನೀರು ತುಂಬಿತು.

"ಅಣ್ಣಾ! ನಿಮಗೆ ದುಃಖಕೊಡಬೇಕೆಂದು ನನಗೆ ಮನಸ್ಸಿಲ್ಲ. ನನಗೆ ಇದನ್ನು ಯಾರೂ ಹೇಳಿಕೊಟ್ಟಿಲ್ಲ. ಆದರೆ ಆ ಹುಡುಗಿಯನ್ನು ಕಂಡ ಕ್ಷಣದಿಂದ—ಅದೇಕೆ ಎಂಬುದು ನನಗೇ ಗೊತ್ತಿಲ್ಲ—ನನ್ನ ಮನಸ್ಸು ಅಯಸ್ಕಾಂತದ ಬಳಿಯ ಕಬ್ಬಿಣದಂತೆ ಅವಳ ಕಡೆಗೇ ವಾಲುತ್ತಿದೆ...."

"ನಿನಗೆ ಹಾಗೆ ಮದುವೆಮಾಡಿಕೊಳ್ಳಬೇಕೆಂಬ ಆಸೆಯಿದ್ದರೆ, ಹುಡುಕಿ ಹುಡುಕಿ ಹೊಲೆಯಳನ್ನೇ ಸೇರಬೇಕೆ? ಏಕೆ. ನಮ್ಮಾಳ್ವಾರರ ಮಗಳಿಲ್ಲವೇ? ವೇದಾಂತದೇಶಿಕನ ನಾದಿನಿಯಿಲ್ಲವೇ? ಶ್ರೀವೈಷ್ಣವನು ಹೊಲೆಯಳನ್ನು ಮದುವೆಯಾಗಲು ಎಲ್ಲಿಯಾದರೂ ಸಾಧ್ಯವೆ?...."

"ಅಣ್ಣ! ನೀವು ಬೇರೆ ಭಾವಿಸಬೇಡಿ. ಆ ಹುಡುಗಿಯನ್ನು ಮದುವೆಯಾಗಬೇಕೆಂದಾಗಲಿ, ಅವಳಲ್ಲಿ ಸೆರೆಯುಬೇಕೆಂದಾಗಲಿ ನನಗೆ ಆಸೆಯಿಲ್ಲ. ನನಗೆ ಮದುವೆಯೇ ಬೇಡ. ಆದರೆ ಅವಳನ್ನು ನೋಡುತ್ತಿರಬೇಕು, ಅವಳ ಮಾತುಗಳನ್ನು ಕೇಳುತ್ತಿರಬೇಕು, ಅಷ್ಟೆ....ಅವಳಿಗೂ ಅದೇ ಆಸೆ. ಇಷ್ಟಲ್ಲದೆ ಹೆಚ್ಚಿನ ಬಯಕೆ ಇಲ್ಲ. ಒಬ್ಬರ ಕೂಡ ಒಬ್ಬರು ಮಾತನಾಡಿ, ಒಬ್ಬರನ್ನು ಒಬ್ಬರು ನೋಡಿದರೆ, ಅಷ್ಟರಲ್ಲಿ ದೋಷವೇನುಂಟು?"

"ಆದರೂ ಜನರ ಬಾಯಿಗೆ ಹೆದರಬೇಕಪ್ಪ."

"ಬಾಯಿಗೆ ಬಂದ ಹಾಗೆ ಮಾತನಾಡುವ ಜನಗಳು ನಮ್ಮ ಸುಖ ದುಃಖಗಳಲ್ಲಿ ಸೆರವಾಗುವರೇನೊ!"

ರಾಮಾನುಜನಿಗೆ ಸಿಟ್ಟು ಬಂತು.

"ಜನರ ಮಾತು ಬೇಡ. ನಾನು ನಿನಗೆ ತಂದೆಯ ಹಾಗೆ. ನಾನು ಹೇಳುತ್ತೇನೆ. ಆ ಹೊಲತಿಯನ್ನು ನೀನಿನ್ನು ಮಾತನಾಡಿಸಕೂಡದು, ನೋಡಕೂಡದು. ಮೊನ್ನೆಯಿಂದ ಅವಳ ವರ್ತನೆಯನ್ನು ತಪ್ಪಿಸಿದ್ದೇನೆ."

ಶಠಗೋಪನ ಮನಸ್ಸು ನೊಂದಿತು—ತನ್ನಿಂದ ಅವಳ ವರ್ತನೆ ತಪ್ಪಿತಲ್ಲಾ, ಎಂದು.

"ಅಣ್ಣಾ! ಅವಳನ್ನು ಹಿಂದಕ್ಕೆ...."

"ಸಾಕು. ನನಗಿನ್ನು ಹೆಚ್ಚು ಮಾತು ಬೇಡ. ಶ್ರೀವೈಷ್ಣವನಿಗೂ ಹೊಲೆಯಳಿಗೂ... ನೀನೇನು ಹಾಳು ಇಂಗ್ಲಿಷ್ ಕಲಿತವನೆ? ಸಂಸ್ಕೃತ ಅಭ್ಯಾಸಮಾಡಿ ಸಾರ್ಥಕವಾಯಿತು! ಶ್ರೀವೈಷ್ಣವನು....ಹೊಲೆಯಳನ್ನು ....ಪ್ರೀತಿಯಂತೆ!....ಪ್ರೀತಿ!...."

"ಪ್ರೀತಿಗೆ ಜಾತಿ ಬೇರೆಯೆ!" ಎಂದ ಶಠಗೋಪ. ಅದು ಸಂಕಟದಿಂದ ಅಂದ ಮಾತು.

"ನೋಡು, ನನಗೆ ರೇಗಿಸಬೇಡ ..."

ಅಷ್ಟು ಹೊತ್ತಿಗೆ ಕಣ್ಣೀರು ಸುರಿಸುತ್ತ ಶಠಗೋಪನ ಅತ್ತಿಗೆ ಬಂದು, "ಏನು ಶಠಗೋಪಾ! ಹೀಗೆ ಮಾಡಬಹುದೆ? ಊರಿನವರೆಲ್ಲ ನಮ್ಮನ್ನು ಹೀಯಾಳಿಸುವಂತಾಯಿತೆ!" ಎಂದರು.

ಶಠಗೋಪ ಆವರೆಗು ತನಗಾದ ಸಂಕಟವನ್ನು ಹೊಟ್ಟೆಯೊಳಗೆ ಅದುಮಿ ಹಿಡಿದಿದ್ದ. ಆಗ, ತಾಯಿಯೆಂದು ಗಣಿಸಿದ್ದವಳ ಕಣ್ಣಲ್ಲಿಯ ನೀರು ಕಂಡು ಸಂಕಟವುಕ್ಕಿತು. ಹಿಂದು ಮುಂದು ನೋಡದೆ, ಮಗುವಿನಂತೆ ಅಳುತ್ತ, ತನ್ನ ಅಣ್ಣ ಅತ್ತಿಗೆಯವರ ಮುಂದೆ ಬಂದು ಬಿದ್ದು, "ಮಾಡಿದ್ದು ತಪ್ಪಾಯಿತು! ತಪ್ಪಾಯಿತು!" ಎಂದು ಗೋಗರೆದನು.

ರಾಮಾನುಜನಿಗೆ ತಮ್ಮನನ್ನು ನೋಡಿ ಅಳುವೂ ಸಂತೋಷವೂ ಒಟ್ಟಾಗಿ ಉಂಟಾಯಿತು. ತಮ್ಮನನ್ನು ಮೇಲೆಬ್ಬಿಸಿ, ಅವನ ಕಣ್ಣೀರೊರಸಿ, "ಕಂದ, ಶಠಗೋಪ! ನೀನು ಸ್ವಬುದ್ಧಿಯಿಂದ ಹೀಗೆ ಮಾಡಲಿಲ್ಲವೆಂದು ನನಗೆ ಮೊದಲಿಂದ ಗೊತ್ತು. ಹೋಗಲಿ. ಹಿಂದಿನದೆಲ್ಲ ಮರೆತುಬಿಡು. ನಡೆ, ಸ್ನಾನಮಾಡಿ ದೇವರಿಗೆ ಪೂಜೆಮಾಡಿ ಬಾ.... ತಿರುನಾರಾಯಣನ ಮನೆಗೆ ಊಟಕ್ಕೆ ಹೋಗಬೇಕು" ಎಂದು ಸಂತೈಸಿ ಕಳುಹಿ, ತಮ್ಮನು ದಾರಿಗೆ ಬಂದನೆಂದು ಹಿಗ್ಗಿದನು.

ಶಠಗೋಪನಿಗೆ ಎಷ್ಟೆಷ್ಟೇ ತಡೆದರೂ ರತಿನಿಯ ನೆನಪನ್ನ ಅಳಿಸಲು ಸಾಧ್ಯವಾಗಲಿಲ್ಲ. ಒಮ್ಮೆಯೇ ಸಾಧ್ಯವಾಗುವುದೆ? ಸ್ನಾನಮಾಡುತ್ತಿರುವಾಗ ರತಿನಿಯ ಕಣ್ಣೀರಿನಲ್ಲಿ ತಾನು ಮಿಂದಂತೆ ಚಿತ್ರ....ನಾಮವಿಟ್ಟುಕೊಳ್ಳುವಾಗ ರತಿನಿಯ ಜೋತುಬಿದ್ದ ಮುಖ ಕನ್ನಡಿಯಲ್ಲಿ ಕಾಣುವುದು .... ಸಂಧ್ಯಾವಂದನೆಯಲ್ಲಿ ರತಿನಿಯ ಹೆಸರಿನ ಗಾಯತ್ರಿ .... ದೇವರಿಗೆ ಪುಷ್ಪ ಸಮರ್ಪಿಸುವಾಗ ಹೂಗಳನ್ನು ರತಿನಿಯ ತುರುಬಿಗೇರಿಸಿದಂತೆ ಭಾವನೆ....

* * * *

ತಿರುನಾರಾಯಣನ ಮನೆಗೆ ಹೊರಟಾಗ ಮಧ್ಯಾಹ್ನ ಹನ್ನೆರಡು ಗಂಟೆ. ಅಣ್ಣತಮ್ಮಂದಿರಿಬ್ಬರೂ ನಿತ್ಯಕರ್ಮಗಳನ್ನು ಮುಗಿಸಿ ಹೊರಟಿದ್ದರು.

ಅವರ ಪಕ್ಕದ ಮನೆಯ ಹುಡುಗ ಕಾಲೇಜಿನ ವಿದ್ಯಾರ್ಥಿ. ಅವರು ಹೊರಡುವ ವೇಳೆಗೆ ಪಂಪಭಾರತ ಓದುತ್ತಿದ್ದ. ಓದುತ್ತ ಓದುತ್ತ ಅವನಿಗೆ ಆವೇಶ ಹತ್ತಿತ್ತು. ಸನ್ನಿವೇಶ ಅಂಥದು. ಕೌರವನು ಭೀಷ್ಮನಿಗೆ ವೀರಪಟ್ಟ ಕಟ್ಟಿದಾನೆ....ಕರ್ಣನಿಗೆ ಕೋಪ ಕೆರಳಿದೆ.... "ನಮ್ಮಂಥ ಯುವಕರಿರುವಾಗ ಈ ಮುದುಕನಿಗೇಕೆ ಪಟ್ಟ?" ಎಂದಿದ್ದಾನೆ....ಕೇಳಿದ ದ್ರೋಣನಿಗೆ ಕೋಪ ಕುದುರಿದೆ.... 'ಬಾಯಿ ಮುಚ್ಚೋ ಬೆಸ್ತ!' ಎಂದಿದ್ದಾನೆ....ಕರ್ಣನಿಗೆ ರಕ್ತ ಕುದಿಯುತ್ತ ಇದೆ....ಕರ್ಣ ಹೇಳುತ್ತಾನೆ—ಓದುವವನಿಗೂ ರಕ್ತ ಕುದಿಯುತ್ತಿದೆ—ಕರ್ಣನ ಮಾತನ್ನು—ಕೇಳಿದ ಕಲ್ಲು ಕೂಡ ಕಿಡಿಕಿಡಿಯಾಗುವ ಹಾಗೆ ಹೇಳುತ್ತಾನೆ:

> ಕುಲಮನೆ ಮುನ್ನಮುಗ್ಗಡಿಪಿರೇಂ ಗಳ ನಿಮ್ಮ ಕುಲಂಗಳಾಂತು ಪೋ ।
> ಪರ್ಪಿನವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಛಲಂ ಕುಲಂ ಗುಣಂ ॥
> ಕುಲಮಭಿಮಾನಮೊಂದೆ ಕುಲಮುಣ್ಮ ಕುಲಂ ಬಗೆವಾಗಳೀಗಳೀ ।
> ಕಲಹದೊಳಣ್ಣ ನಿಮ್ಮ ಕುಲಮಾಕುಲಮಂ ನಿಮಗುಂಟುಮಾಡುಗುಂ ॥

ಅಣ್ಣತಮ್ಮಂದಿರು ಒಬ್ಬರ ಮುಖವನ್ನು ಒಬ್ಬರು ನೋಡಿದರು. ರಾಮಾನುಜ ಮುಖ ತಗ್ಗಿಸಿದ. ಇಬ್ಬರೂ ಮಾತನಾಡದೆ ಮುಂದಕ್ಕೆ ನಡೆದರು.

* * * *

"ಕಟ್ಟು ಮೂರಾಣೆ ಮಾಡಿಕೊ."

"ಇಲ್ಲ, ಸಾಮಿ! ಕಟ್ಟು ಪಾವಲಿ."

ದನಿ ಕೇಳಿ. ಅಣ್ಣನೊಡನೆ ತಲೆ ಬಗ್ಗಿಸಿಕೊಂಡು ಹೋಗುತ್ತಿದ್ದ ಶಠಗೋಪ ಸರಕ್ಕನೆ ತಿರುಗಿದ. ದೂರದಲ್ಲಿ ಒಂದು ಅಂಗಡಿಯ ಮುಂದೆ ರತ್ನಿ ಎಲೆ ಮಾರುತ್ತ ನಿಂತಿದ್ದಳು. ಆರಾಧ್ಯದೇವತೆಯ ಎದುರಿನಲ್ಲಿ ಶಠಗೋಪ ಎಲ್ಲವನ್ನೂ ಮರೆತು, "ರತ್ನೀ!" ಎಂದ. ರತಿನಿ ತಿರುಗಿ ಶಠಗೋಪನನ್ನು ಕಂಡಳು. ಅವಳ ಕಣ್ಣುಗಳ ಶೂನ್ಯದಲ್ಲಿ ಎಂದೂ ಕಾಣದ ಬೆಳಕಿನ ಲಹರಿ ಹರಿಯಿತು. ಎಲೆ ಹೆಡಿಗೆಯನ್ನ ಇದ್ದಲ್ಲಿಯೇ ಬಿಟ್ಟು 'ಏನೋರಾ!' ಎಂದು ಹೆಜ್ಜೆ ಮುಂದಿಟ್ಟಳು. ಶಠಗೋಪ ಏನು ತಾನು ಮಾಡುವೆನೆಂದು ತಿಳಿಯುವುದಕ್ಕೆ ಮುಂಚೆಯೇ ಅವಳ ಬಳಿ ಸೇರಿದ್ದ. ರಾಮಾನುಜ ಸ್ತಂಭಿತನಾಗಿಬಿಟ್ಟ.

"ರತ್ನಿ! ಮೂರು ದಿನದಿಂದ ಏಕೆ ಬರಲಿಲ್ಲ?"

ರತ್ನಿಯ ಕಣ್ಣುಗಳು ಶಠಗೋಪನನ್ನು ಒಳಕ್ಕೆ ಸೆಳೆದುಕೊಳ್ಳುತ್ತಿದ್ದುವು.

ಮಾತು ಕಳೆದುಕೊಂಡಿದ್ದ ರಾಮಾನುಜ ದೂರದಿಂದಲೇ ದೈನ್ಯದಿಂದ 'ಶಠಗೋಪ! ಶಠಗೋಪ!' ಎಂದ. ರತಿನಿಯಲ್ಲಿ ಲೀನನಾಗಿದ್ದ ಶಠಗೋಪನಿಗೆ ಅಣ್ಣನ ಕೂಗು ಮುಟ್ಟಲಿಲ್ಲ. ರಾಮಾನುಜ ಹೊಲತಿಯ ಹತ್ತಿರ ಹೋಗಲು ಹೆದರಿ, ದೂರದಿಂದಲೇ ಮತ್ತೆ ಕೂಗಿದ. ತಮ್ಮ ಅಲುಗಲಿಲ್ಲ. ರಾಮಾನುಜ ಕೊಂಚ ಪರುಷವಾಗಿಯೇ 'ಶಠಗೋಪ!' ಎಂದ. ಶಠಗೋಪ ಕದಲಲಿಲ್ಲ

ರಾಮಾನುಜನಿಗೆ ತಮ್ಮನನ್ನು ತಿರುಗಿಸಲು ಸಾಧ್ಯವಾಗಲಿಲ್ಲ. ಕೊನೆಗೆ ರೋಸಿಹೋಗಿ, "ಇಂದಿನಿಂದ ನೀನು ನನ್ನ ತಮ್ಮನಲ್ಲ" ಎಂದು ಒದರುತ್ತ ಹೊರಟುಹೋದ. ಸುತ್ತ ನೆರೆದಿದ್ದ ಜನರು ಕೆಲವರು ಗೇಲಿ ಮಾಡಿದರು, ಕೆಲವರು ಮನಸ್ಸಿಗೆ ಬಂದಹಾಗೆಲ್ಲ ಮಾತನಾಡಿದರು....

ಒಲವಿನ ಹೊನಲಿಗೆ ಈ ಹುಲು ಅಣೆಗಳೆ! ಶಠಗೋಪ ತನ್ನ ಒಲವಿನ ಅಧಿದೇವತೆಯಾದ ರತ್ನಿಯ ಕಾಲಬಳಿ ಮಂಡಿಯೂರಿ, ಅವಳ ಧೂಳುಮುಚ್ಚಿದ ಸೆರಗಿನಲ್ಲಿ ಮುಖವಿಟ್ಟು, "ಕರಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ ಅವರೆತ್ತ ಬಲ್ಲರೆನ್ನ ಸುಖದುಃಖವ" ಎಂದು ಮೆಲ್ಲಮೆಲ್ಲನೆ ಉಸುರಿದ.

ರತ್ನಿಯ ಮುಖಕ್ಕೆ ಒಂದು ಅಪೂರ್ವ ಕಳೆಯೇರಿತ್ತು. ಅವಳ ತುಟಿಗಳು ಅದಿರುತ್ತಿದ್ದುವು. ಅವಳ ನಡುಗುವ ಬೆರಳುಗಳು ಅವನ ತಲೆಯನ್ನು ನೇವರಿಸುತ್ತಿದ್ದುವು. ಮುತ್ತಿನ ಸೇಸೆಗಳಂತೆ ರತಿನಿಯ ಕಣ್ಣೀರಿನ ಕಣಗಳು ಶಠಗೋಪನ ತಲೆಯ ಮೇಲೆ ಚೆಲ್ಲಿದುವು.

* • •

"ಆಗಿಹೋಯಿತೆ ಕತೆ?" ಎಂದ, ಕಂಠಿ.

"ಆಗಿಹೋಗದೆ ಮತ್ತೆ?" ಎಂದೆ.

"ಏನು ಕತೆಯಯ್ಯಾ? ಶುದ್ಧ ಅಸಂಭವ!....ಹೀಗೆ ಎಲ್ಲಾದರೂ ನಡೆಯೋದುಂಟೆ?...."

" ಅಲ್ಲವೊ ಪೆಂಗೆ ! ನೀನೂ ರಾಮಾನುಜನ ಹಾಗೇ ಹೇಳ್ತಿಯಲ್ಲ, ಯಾಕೋ !....'ಎಲ್ಲಾದರೂ ನಡದದ್ದುಂಟೆ ?' ಎಂದರೆ ' ಇಲ್ಲ—ನನಗೆ ಗೊತ್ತಿಲ್ಲ' ಎನ್ನುತ್ತೇನೆ. ' ನಡೆಯೋದುಂಟೆ ?' ಎಂದರೆ—ಭೇಷಕ್ ಸಾಧ್ಯ !...."

" ಏನೋಪ್ಪ ! ಆದರೂ...."

" ಅಲ್ಲವೊ, ನೇಮಿಚಂದ್ರ ಅನ್ನೋ ಕವಿ ಹೇಳಿರೋದು ಕೇಳಿದೀಯೋ ಇಲ್ಲವೊ ?

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ರಾಮನಕ್ರಮಂ ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರಸಂ ನರಸಿಕ್ಕಿ ಗಂಟಲಂ ॥
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧಮೊಳಲ್ತಿ ಕಟ್ಟಿದರ್ ।
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ ॥ "

ಕಂಠಿ ಪೆಚ್ಚಾದ !

# ಕೆಸರಿನ ಕಮಲ

---

ನಿರಂಜನ ಬಹಳ ಜನ ಹೆಂಗಸರನ್ನು ನೋಡಿದ್ದ. ಆದರೆ. ಅವನ ದುರದೃಷ್ಟ—ಅವನು ನೋಡಿದ್ದವರೆಲ್ಲ ಸರಿಸಿದ ಸೆರಗಿನವರು, ಸಡಿಲಿದ ನಿರಿಯವರು. ಮೇಲಾಗಿ ಅವನು ಸುಂದರನೇನೋ ಹೌದು. ಆದರೆ ಅದು ಗಂಡಸಿನ ಸೌಂದರ್ಯವಲ್ಲ, ಹೆಂಗಸಿನ ಸೌಂದರ್ಯ. ಸಾಲದ್ದಕ್ಕೆ "ಎಲ್ಲ ಹೆಂಗಸರೂ ಹೀಗೆಯೆ! ಬಾ ಎನ್ನುವುದು ತಡ—ಓಡಿ ಬರುತ್ತಾರೆ" ಎಂದು ಅವನ ಭಾವನೆ. ಏನೋ, ಅವನಿಗೆ ಹಾಗೆಯೆ ನಡೆಯುತ್ತಿತ್ತು. ಏಕೆಂದರೆ, ಅವನಿಗೆ ಸಿಕ್ಕುತ್ತಿದ್ದವರು ಅಂಥವರು. ಆದರೆ ವರ್ಷಕ್ಕೆ ಹನ್ನೆರಡು ತಿಂಗಳೂ ಬಿಸಿಲಿರುತ್ತದೆಯೆ? ಮಧ್ಯೆ ಮಧ್ಯೆ ಮಳೆ ಬೀಳುವುದುಂಟು, ಗುಡುಗು ಮಿಂಚಿ ಬರಸಿಡಿಲು ಎರಗುವುದೂ ಉಂಟು.

ನಿರಂಜನ ಸಿರಿಪುರದ ಮೃಗಾಲಯದ ಮುಖ್ಯಾಧಿಕಾರಿ; ಎಂದರೆ, ತನ್ನ ಮಾತನ್ನು 'ಚಲಾಯಿಸುವ' ಶಕ್ತಿ ಅಲ್ಲಿ ತೋರಿಸುತ್ತಿದ್ದ. ಕೆಲಸಕ್ಕೆ ಸೇರಿ ಎರಡು ವರ್ಷವಾಗಿರುವಾಗ, ಮೃಗಾಲಯಕ್ಕೆ ಹೊಸ ಆನೆಯೊಂದನ್ನು ಸೋಲಿಗರಿಬ್ಬರು ಕೊಂಡುಬಂದರು. ಅವರಿಬ್ಬರೂ ಗಂಡಹೆಂಡಿರು. ಅವರು ತಂದದ್ದು ಬಹು ದೊಡ್ಡ ಆನೆ. ಆನೆಯನ್ನು ಇರಿಸಿಕೊಳ್ಳುವುದಕ್ಕೆ ಮುಂಚೆ ಕೊಂಚ ಮಾತು ಕತೆ ನಡೆಯಿತು.

ಅಧಿಕಾರಿಗಳು ಆನೆಯ ಮೈ ಪರೀಕ್ಷಿಸುತ್ತಿದ್ದರು. ಮುಖ್ಯಾಧಿಕಾರಿ ನಿರಂಜನ ಮಾತ್ರ ಆನೆಯೊಡನೆ ಬಂದಿದ್ದ ಹೆಂಗುಸನ್ನು ಪರೀಕ್ಷಿಸುತ್ತಿದ್ದ.

ಸೋಲಿಗರ ಹೆಣ್ಣುಮಗಳವಳು, ಕೆಸರಿನಲ್ಲಿ ಹುಟ್ಟಿದ ಕಮಲದಂತಿದ್ದಳು. ಸ್ವಲ್ಪ ಶ್ಯಾಮವರ್ಣವಾದರೂ ಹಗಲಿನಂತೆ ಮನೋಹರವಾಗಿದ್ದಳು. ಅವಳ ಮೋಹನವಾದ ನಗು ಮನಸ್ಸನ್ನು ಕುಲುಕುತ್ತಿತ್ತು. ಸಹಜಲಾವಣ್ಯದಿಂದೆಸೆವ ಕಾಡು ಕುಸುಮದಂತೆ ಬಳೆದ ಪ್ರಕೃತಿಯ ನೈಜಪುತ್ರಿ ಅವಳೆಂಬುದು ಅವಳ ಮುಖದಲ್ಲೇ ಕಾಣುತ್ತಿತ್ತು. ಅವಳ

ಆಕೃತಿಯಲ್ಲಿ ನವಯೌವನವು ಸಮುತ್ತೂಕವಾಗಿ ಹೊಂದಿಕೊಂಡು ಹೊರ ಗಾಗುತ್ತಿತ್ತು. ಅವಳ ಪ್ರಕೃತಿಯಲ್ಲಿ ಚೇತನವೂ ಸತ್ವೋದ್ರೇಕವೂ ತುಂಬಿ ತುಳುಕಾಡಿ, ಆ ಸೂಕ್ಷ್ಮವಾದ ಕಟಿದೇಶದಲ್ಲಿ ಸಂಕುಚಿತವಾಗಿ ನಿಂತು, ಅಲ್ಲಿಗೆ ಮೇಖಲೆಯಂತೊಪ್ಪಿತ್ತು. ಅವಳ ಅಂಗಸೌಷ್ಟವವೂ ಬಿಗಿಯಾದ ಮೈಕಟ್ಟೂ ತುಂಬಿದ ಕೆನ್ನೆಗಳೂ ನೋಡುವವರಿಗೆ ಜುಮ್ಮೆಬ್ಬಿ ಸುತ್ತಿದ್ದುವು.

ಹೆಚ್ಚೇನು? ಅಧಿಕಾರಿಗಳು ಆನೆಯನ್ನೊಪ್ಪಿದರು. ನಿರಂಜನನೂ ಅದಕ್ಕೆ ಸಮ್ಮತಿಸಿದ.

ಆದರೆ ಭೈರವನು---ಆ ಆನೆಯ ಹೆಸರು—ತನ್ನ ಒಡತಿಯ ಮಾತನ್ನಲ್ಲದೆ ಇತರರಾಡಿದುದನ್ನು ಕೇಳುತ್ತಿರಲಿಲ್ಲವಾದಕಾರಣ, ಅದರ ಒಡತಿಯನ್ನೂ ಅಲ್ಲೇ ಚಾಕರಿಗೆ ಇಟ್ಟುಕೊಳ್ಳಬೇಕಾಯಿತು. ಅದರ ಮೇಲೆ ಅವಳದೊಂದು ಹಠ—ತನ್ನ ಗಂಡನಿಗೂ ಅಲ್ಲೇ ಕೆಲಸಕೊಟ್ಟು ಸಂಬಳ ಕೊಡದಿದ್ದರೆ ತಾನಿರುವುದಿಲ್ಲೆಂದು. ಅದುಸಲುವು ಅವನನ್ನೂ ನಿಯೋಗಿಸಿ ಕೊಳ್ಳಬೇಕಾಯಿತು. ಅವನಿದ್ದರೆ ಅವಳು—ಅವಳಿದ್ದರೆ ಆನೆ—ಆನೆಯಿದ್ದರೆ ಜನರ ಬರವು—ಜನ ಬಂದರೆ ಇಲಾಖೆಗೆ ಹಣ—ಸರಿ!.... ಹಾಗೂ ಅವನಿದ್ದರೆ ಅವಳು--ಅವಳಿದ್ದರೆ....ನಿರಂಜನನಿಗೆ....

ಅಂತೂ ಗಂಡಹೆಂಡಿರಿಗೆ ಬೇರೇನೂ ಕೆಲಸವಿಲ್ಲ. ಅವನು ಆನೆಯ ಮೈತೊಳೆಯುವುದಕ್ಕೆ ; ಅವಳು ಅದಕ್ಕೆ ಉಣಿಸುವುದಕ್ಕೆ.

ಆನೆ ಬಂದು ಒಂದು ವಾರವಾಯಿತು. ಬಂದು ಹೋದವರ ಕಣ್ಣು ಆನೆಯ ಮೇಲೆ. ನಿರಂಜನನಿಗೆ ಮಾತ್ರ ಅದರ ಒಡತಿಯ ಮೇಲೆ ಕಣ್ಣು.

ಒಂದು ದಿನ ನಿರಂಜನನು ಅವಳನ್ನು—

" ನಿನ್ನ ಹೆಸರೇನು ?" ಎಂದು ಕೇಳಿದ.

" ಸ್ವಾಲಿಗರ ಚೆನ್ನಿ, ಮಾಸಾಮಿ " ಎಂದಳು.

" ಸೋಲಿಗರ ಚೆನ್ನಿ !....ಉಹ್ಞು !....ಬೇಡ ; ಇನ್ನು ಮೇಲೆ ನೀನು ಬರಿಯ....' ಚೆನ್ನಿ '....ಗೊತ್ತಾಯಿತೆ ?...."

ಚೆನ್ನಿ ಬೆಚ್ಚಿದಳು. ಆದರೆ ಅದು ಕ್ಷಣಕಾಲ ಮಾತ್ರ. ಪುನಃ ನಗುನಗುತ್ತ—ಎಂದಿನಂತೆ ಮನಸ್ಸನ್ನು ಕುಲುಕುವ ನಗು—

" ಮಾಸಾಮಿ !...." ಎಂದಳು.

" ಓ್ಹ !....ನಿನ್ನ ಹೆಸರೇನು ?"

ಚೆನ್ನಿ ನಗುತ್ತ, " ಚೆನ್ನಿ, ಮಾಸಾಮಿ !" ಎಂದಳು.

ನಿರಂಜನನೂ ನಗುತ್ತ—ಹೆಂಗಸಿನ ನಗು—ತಲೆದೂಗಿ, " ಚೆನ್ನಿ ! ....ಚೆನ್ನಿ !....ಚೆ....ನ್ನಿ !....ಚೆನ್ನಾಗಿದೆ!" ಎಂದ.

ಆನೆ ಬಂದು ಒಂದು ಪಕ್ಷವಾಯಿತು. ಎಲ್ಲರಿಗೂ ಆನೆಯ ಮೇಲೆ ಕಣ್ಣು. ಬಂದವರು ಆನೆಯ ಹತ್ತಿರ ಸಲಾಂಮಾಡಿಸಿ, ಚೆನ್ನಿಗೆ ಕಾಸು ಕೊಡುವರು. ಅವಳ ಮುಖ ಅರಳುವುದು. ನಿರಂಜನ ಅವಳಿಗೆ ರೂಪಾಯಿ ಕೊಡುವನು. ಅವಳು ತಾನೇ ಕೈಮುಗಿಯುವಳು. ಕೊಡುವಾಗ ಅವನ ಕೈ ಅವಳ ಕೈಸೋಕುವುದು. ಅವಳ ಮುಖಭಾವ ಮುಹೂರ್ತ ತಗ್ಗಿ, ಕುಂದುಕಾಣುವ ಮುನ್ನ, ಅರಳಿ ಹಿಗ್ಗುವುದು. ನಿರಂಜನನೂ ಹಿಗ್ಗುವನು.

ಇದು ಹೀಗಿರಲು, ಚೆನ್ನಿಯ ಗಂಡ ಕಣ್ಣುಮುಚ್ಚಿ ಕುಳಿತಿರಲಿಲ್ಲ. ಇದೆಲ್ಲ ಅವನ ಕಂಗಳಿಗೆ ಕಾಣುತ್ತಿದ್ದುವು. ಮಲೆಯ ಗೊಂಡಾರಣ್ಯದಲ್ಲಿ, ಆನೆಗಳ ಜತೆಗೆ ಆನೆಯಾಗಿ ಬಳೆದವನವನು. ಎಲ್ಲವನ್ನೂ ಸಾವಧಾನ ವಾಗಿ ನೋಡುತ್ತಿದ್ದವನು, ಒಂದು ದಿನ—

" ಏನೇ ! ಆ ಹುಡುಗ ಯಿಪರೀತ ಯಿಚ್ಕೊಂಡಿರೋ ಹಂಗೆ ಕಾಣುತ್ತೆ?" ಎಂದು ಚೆನ್ನಿಯನ್ನು ಕೇಳಿದ.

" ಔದು. ಅವನೇನೊ ಉತ್ತಂಜಾತಿ...."

" ಉ ...ತ್ತ....ಂ....ಜಾತಿ ! ಕೇಳು ನಡತೆ ! .. "

" ಏನು ಮಾಡಬೇಕು ಅಂತೀಯ, ಅಂಗಾರೆ ?...."

" ಬೇರೆ ಎಲ್ಲಿಯಾದರೂ ಹೋಗೋಣವಾ?"

" ಏನು? ಅವನಿಗೆ ಅಂಜಿಕೊಂಡಾ ?"

" ಮತ್ತೆ ?"

" ನನ್ನಲ್ಲಿ ನಂಬಿಕೆಯಿಲ್ವಾ ನಿನ್ಗೆ ?"

ಗಂಡಹೆಂಡಿರು ಪರಸ್ಪರ ಮುಖ ನೋಡಿದರು. ತುಟಿ ನಾಲ್ಕು ಒಂದಾದುವು.

* * * *

ತಿಂಗಳಾಯಿತು....ಆದಿತ್ಯವಾರ....ಹೊರಗಿನವರಾರೂ ವ್ಯಾಗಾಲಯ ವನ್ನು ನೋಡುವುದಕ್ಕೆ ಬರುವಂತಿಲ್ಲ. ಅಂದು ನಿರಂಜನ ಹೊಸ ಸೀರೆ ಯೊಂದನ್ನು ಕೊಂಡುಬಂದು, ಚೆನ್ನಿಗೆ ಉಟ್ಟುಕೊಳ್ಳೆಂದು ಕೊಟ್ಟ. ಅವಳು ಅವನ ಮುಖ ನೋಡಿದಳು. ನಿರಂಜನ ಇತರರ ಭಾವಗಳನ್ನು ಗ್ರಹಿಸದಿದ್ದರೂ, ತನ್ನ ಭಾವಗಳನ್ನು ಮರೆಮಾಚುವುದರಲ್ಲಿ ಅದ್ವಿತೀಯ. ಚೆನ್ನಿ "ಆಗಲಿ! ಉಟ್ಟುಕೊಂಡರೇನಂತೆ?" ಎಂಬಂತೆ ಕತ್ತು ಕುಣಿಸಿ, ಸೀರೆಯನ್ನು ತೆಗೆದುಕೊಂಡು ಪಕ್ಕದ ಗುಡಿಸಿಲಿಗೆ ಹೋದಳು. ಅವಳ ಗುಡಿಸಿಲು ಆನೆಯನ್ನು ಕಟ್ಟಿದ್ದ ಬಳಿಗೆ ತುಸು ದೂರದಲ್ಲಿಯೆ.

ಮರೆಯಾಗುವವರೆವಿಗೂ ಚೆನ್ನಿಯು ಹಿಂದಿದ್ದ ನಿರಂಜನನ ದೃಷ್ಟಿ ಸುತ್ತ ತಿರುಗುತ್ತಿತ್ತು. ತೋಟದ ಮಧ್ಯದಲ್ಲಿತ್ತು ಒಂದು ಕೃತಕ ಕಾಸಾರ. ಅದರ ನಡುವೆ ಒಂದು ಬಿಳಿ ಶಿಲೆಯ ಚಿಲುಮೆ. ಅದರಲ್ಲಿ ಚಿಮ್ಮಿದ ನೀರು ಸೂರ್ಯರಶ್ಮಿಗಳೊಡನಾಡಿ, ನಲಿದಾಡಿ ಹೊರಪಡಿಸುತ್ತಿದ್ದ ಗುಳು ಗುಳು ಧ್ವನಿ, ಆ ಧಾರಾಯಂತ್ರದ ಅಕ್ಷಯ ಜೀವಸತ್ವವು ನುಡಿಯುತ್ತಿದ್ದ ನಿರಂತರ ಗೀತದಂತಿತ್ತು. ಸುತ್ತಿನ ಬಳ್ಳಿಗಳು ಮನಸ್ಸುಬಂದಂತೆ ಸುಳಿ ದಾಡುತ್ತಿದ್ದುವು. ಅವುಗಳಲ್ಲೊಂದು ಬಳ್ಳಿ ನೀರಿನ ಮೇಲೆ ಹಾವಿನಂತೆ ಹರಿದಾಡಿ, ಆ ಚಿಲುಮೆಯನ್ನು ಆಚ್ಛಾದಿಸಿ, ಅಲ್ಲಿಂದ ಲಾಲಿಲಾಲಿಯಾಗಿ ತೂಗಾಡುತ್ತಿತ್ತು. ಅದರಲ್ಲಿಯ ಧೂಮ್ರಕುಸುಮಸಂಚಯದಲ್ಲಿ ಪ್ರತಿ ಯೊಂದೂ ಮಣಿಯಂತೆ ಹಿಗ್ಗಿ ಹೊಳೆಯುತ್ತಿತ್ತು. ಆ ಧೂಮ್ರವರ್ಣದ ಪುಷ್ಪಗುಚ್ಛಗಳು ಗಾಳಿಯಲ್ಲಿ ನಲಿದು, ಬೆಳಕಿನಲ್ಲಿ ಹೊಳೆದು, ತಿಳಿಗೊಳ ದಂತರಾಳದಲ್ಲಿ ಪ್ರತಿಬಿಂಬಿಸಲು, ಪುಷ್ಪಗಳ ಕಾಂತಿಯೂ, ಆದರ ಪ್ರತಿ ಬಿಂಬದ ರಾಗಾಧಿಕ್ಯವೂ ಸಂಯೋಗಿಸಿ ಮನಮೋಹಕವಾಗಿತ್ತು. ಅಲ್ಲಿಯ ಪ್ರತಿ ಎಲೆಯೂ ಪ್ರತಿ ಸುಮವೂ ಒಂದು ಅಪೂರ್ವ ಶೋಭೆಯನ್ನೊಂದಿ ದ್ದುವು. ಆ ಎಲೆಗಳ ಹೂಗಳ ಮೇಲೆ ನಿಂತಿದ್ದ ಜಲಕಣಗಳು ಸೂರ್ಯ ಕಿರಣಗಳಿಂದ ಮುತ್ತಿಕ್ಕಿಸಿಕೊಂಡು, ನಾಚಿ ನಗುತ್ತಿದ್ದುವು.

ಹೀಗಿರಲು ಗುಡಿಸಿಲಿನಿಂದ, ಹೊಸ ಸೀರೆಯುಟ್ಟು, ಕಮನೀಯ ಸೌರಭಗಳಿಂದ ಜೀವಿಸುವ ಚೇತನದಂತೆ, ಸುತ್ತುಮುತ್ತಿರುವ ಲತಾ ವಿತಾನಗಳ ಸೋದರಿಯಂತೆ, ಬಾಗುತ್ತ ಬಳುಕುತ್ತ ಚೆನ್ನಿ ಬರುತ್ತಿದ್ದಳು.

ಅವಳ ಆಗಿನ ಸೌಂದರ್ಯ ಹಿಂದಿನದಕ್ಕಿಂತ ಮಿಗಿಲಾಗಿತ್ತು. ಪ್ರದೀಪ್ತವಾಗಿ ಪರಿಸ್ಫುಟವಾದ ಲಾವಣ್ಯದಿಂದ ಹಗಲಿನಲ್ಲಿ ಪ್ರಕಾಶಿಸುತ್ತ ಬಂದಳು ಚೆನ್ನಿ.

ಅವಳ ಮುಖದ ಸರಳತೆಯನ್ನು, ಮುಗ್ಧತೆಯನ್ನು, ಮಾಧುರ್ಯವನ್ನು ಹೊಸಬಗೆಯಾಗಿ ಕಂಡು ನಿರಂಜನ ಚಕಿತನಾದ. ಹಾಗೆಯೇ ಅರಲಿಸಿದ ಕಣ್ಣುಗಳಿಂದವಳನ್ನು ನೋಡುತ್ತ—

"ನಿನ್ನ ಹೆಸರೇನು?" ಎಂದು ಪುನಃ ಕೇಳಿದ.

"ಸ್ವಾಲಿಗ....ಅಲ್ಲ....ಚೆನ್ನಿ, ಮಾಸಾಮಿ!"

ನಿರಂಜನನು ನಕ್ಕ. "ಚೆನ್ನಿ! ಇನ್ನು ಮೇಲೆ 'ಮಾಸಾಮಿ' ಎನ್ನಬೇಡ....ತಿಳಿಯಿತೆ?" ಎಂದ.

"ಅದು ಯಾಕಾ, ಮಾಸಾಮಿ?"

"ಅದಿರಲಿ....ನಿನ್ನ ಹೆಸರೇನು, ಹೇಳು?"

"ಚೆನ್ನಿ!"

"ಚೆ.....ನ್ನಿ!.....ಚೆ .. ನ್ನಿ!.....ಎಲ್ಲಿ ಹೀಗೆ ತಿರುಗು.....ಹೀಗೆ..... ಹೀಗೆ...." ಎಂದವಳನ್ನು ಹಾಗೆ ಹೀಗೆ ತಿರುಗಿಸುತ್ತ, ನಿರಂಜನ ಅವಳ ಹಿಂಭಾವ ಮುಂಭಾವಗಳನ್ನು ನೋಡಿ ನೋಡಿ, ತಣಿಯದೆ ನೋಡುತ್ತಿದ್ದ.

ಅಷ್ಟರಲ್ಲಿ ಚೆನ್ನಿಯ ಗಂಡ ಅಲ್ಲಿಗೆ ಬಂದ. ನಿರಂಜನ ಅವನನ್ನು ಕಾಲಿನಿಂದ ತಲೆಯವರೆಗೂ ನೋಡಿದ. ಅವನು ನಿರಂಜನನ ಕಡೆ ನೋಡದೆ, ತಲೆ ತಗ್ಗಿಸಿಕೊಂಡ.

ನಿರಂಜನ ಚೆನ್ನಿಯ ಕಡೆ ತೋರಿಸಿ, "ಈ ಹೆಂಗಸು ಯಾರಯ್ಯ?" ಎಂದು ಕೇಳಿದ.

"ನನ್ನ ಯೆಂಡ್ರು, ಮಾಸಾಮಿ."

"ಹ್ಞಾ! ನಿನ್ನ ಹೆಂಡತೀನೊ!" ಎನ್ನುತ್ತ ನಿರಂಜನ ಅವನ ಕಡೆ ಗೆರಡು ರೂಪಾಯಿ ಎಸೆದು, ಅವನ ಮುಖವನ್ನೆ ನೋಡುತ್ತ ಅಪಹಾಸ ಸೂಚಕವಾಗಿ ಕೆಳದುಟಿಯನ್ನು ತಿರುವಿ, ದರ್ಪಹೆಮ್ಮೆಗಳನ್ನು ಮುಖದಲ್ಲಿ ತಾಂಡವವಾಡಿಸುತ್ತ, ಠೀಕಿನ ಮೇಲೆ ನಡೆದು ಬಂದು, ಚೆನ್ನಿಯ ಬಳಿ ಸಾರಿ, ಕಣ್ಣಿನೊಳಕ್ಕವಳನ್ನು ಎಳೆದುಕೊಳ್ಳುವಂತೆ ನೋಡುತ್ತ, ಅವಳ ಹೆಗಲಮೇಲೆ ಕೈಹಾಕಿ—

"ಈಗ ಹೇಳು! ಇವಳು ಯಾರು?" ಎಂದ.

ಚೆನ್ನಿ ನಿರಂಜನನ ಕೈ ತೆಗೆಯಲಿಲ್ಲ. ಕ್ಷಣಕಾಲ ಅವಳ ಮುಖದ ಭಂಗಿ, ಬಣ್ಣ ಬೇರೆಯಾಯಿತು. ಆದರೂ ಪುನಃ ಹುಸಿನಗೆ ಬೀರುತ್ತಿದ್ದಳು. ಗಂಡನ ಕಡೆ ನೋಡಿದಳು. ಅವನಿಗೆ ನಿರಂಜನನ ಚರ್ಯೆ ಕಂಡು ಕಣ್ಣರಳಿತು. ತುಟಿ ಅದುರಿತು. ಒಂದಡಿ ಮುಂದಿಟ್ಟ. ಅಷ್ಟರಲ್ಲಿ ಹೆಂಡತಿಯ ಮುಖಭಾವ ನೋಡಿ ಸುಮ್ಮನಾಗಿಬಿಟ್ಟ. ಪ್ರೀತಿಯೊಂದು ಪ್ರವಹಿಸುವಾಗ, ಪತಿಪತ್ನಿಯರ ಅನ್ಯೋನ್ಯ ಭಾವಗಳು ಅವರವರಿಗೆ ಗೋಚರಿಸದಿರುವುವೆ?

ಆದರೆ ಕಾಮುಕತೆಯಿಂದ ಕಣ್ಣು ಕಳೆದುಕೊಂಡಿದ್ದ ನಿರಂಜನನಿಗೆ ಅದು ಯಾವುದೂ ಗೊತ್ತಾಗಲಿಲ್ಲ.

"ಯಾರಿವಳು?" ಎಂದು ಪುನಃ ಕೇಳಿದ.

ಚೆನ್ನಿಯ ಗಂಡ ಕೈಮುಗಿದು, "ನನ್ನ ತಾಯಿ, ಮಾಸಾಮಿ" ಎಂದ.

"ಹಾಗನ್ನು! ಬೇಕೂಫ್! ಅವಳು ನಿನ್ನ ತಾ....ಯಿ. ನಾನು ಯಾರು?"

"ಮಾಸಾಮಿಗಳು .. ನನ್ನ ಧಣಿ....ನನ್ನ ತಂದೆಗಳು...."

ಗಂಡಹೆಂಡಿರು ಒಬ್ಬರ ಮುಖವನ್ನೊಬ್ಬರು ನೋಡಿದರು. ಇಬ್ಬರ ಮುಖವಲ್ಲಿಯೂ ಒಂದೇ ಬಗೆಯ ವಿಕಾರಗಳು ಕಾಣುತ್ತಿದ್ದುವು. ಮುಖವು ಮನಸ್ಸನ್ನು ಸೂಚಿಸುವುದಲ್ಲವೆ?

ನಿರಂಜನ ಅವಳ ಗಂಡನ ಕಡೆಗೆ ಇನ್ನೆರಡು ರೂಪಾಯಿ ಎಸೆದು, ಚೆನ್ನಿಯ ಕೈಯಲ್ಲಿ ಮುರುಮುರುಗುಟ್ಟುವ ಕಾಗದವನ್ನಿಟ್ಟು, "ಚೆನ್ನಿ!.... ಭಾನುವಾರ....ಯಾರೂ ಬರುವಹಾಗಿಲ್ಲ....ರಾತ್ರಿ ತುಂಬಿದ ಬೆಳದಿಂಗಳು ....ಶೃಂಗಾರವಾದ ತೋಟ....ನಾವಿಬ್ಬರು ಮಾತ್ರ....ಹ್ಞ?...." ಎಂದು ಅವಳ ಕಡೆ ನೋಡಿದ.

ಚೆನ್ನಿ ಮೆಲ್ಲನೆ ನಕ್ಕು, "ಆಗಲಿ ಮಾಸಾಮಿ. ನಮಗೇನು ಸಾಮಿ? ಮಾನವಾ?....ಮರ್ಯಾದಿಯಾ?....ಅಣಕೊಟ್ಟರೆ ಸಾಕು...." ಎಂದಳು.

"ಹಣಕ್ಕೇನು? ಇನ್ನೂ ಎಷ್ಟಾದರೂ ಕೊಡುತ್ತೇನೆ.. ಹಾಗಾದರೆ ....ರಾತ್ರಿ....ಎಂಟು....ಎಂಟೂವರೆಗೆ....?"

"ಆಗಲಿ, ಬನ್ನಿ, ಮಾಸಾಮಿ."

"ಹ್ಞ!....ಇದೇ ಸೀರೆಯಿರಲಿ. ಬೇರೆ ಬೇಡ."

"ಆಗಲಿ, ಸಾಮಿ."

ಅವಳ ಹೆಗಲ ಮೇಲಿಟ್ಟಿದ್ದ ಕೈತೆಗೆದು, ನಿರಂಜನ ಚೆನ್ನಿಯ ಗಂಡನ ಕಡೆ ತಿರುಗಿ—

"ಏ! ಯಾರಿಗಾದರೂ ಒದರಿಯೇ! ಜೋಕೆ! ಬಾಯಿಬಿಟ್ಟರೆ ನಿನ್ನ ಬಾಯಿಗೆ ಮಣ್ಣು ಬಿದ್ದೀತು!" ಎಂದು ಹೆದರಿಸಿದ.

"ಏನು ಮಾಸಾಮಿ, ಯೇಳೊ ಮಾತು! ನಿಮ್ಮ ಉಪ್ಪು ತಿಂದು, ನಿಮಗೇ ಎರಡು ಬಗೆಯುವುದಾ ಮಾಸಾಮಿ? ದರ್ಮವಾ ಮಾಸಾಮಿ ಅದು? ನಮಗೇನೈತೆ ಸಾಮಿ? ನನ್ನೆಂಡ್ರು....ಅಲ್ಲ, ಅವಳು ಯೇಳಿ ದಂಗೇನೇ ನಮಗೇನೈತೆ? ಮಾನವಾ? ಮರ್ಯಾದಿಯಾ? ಏನೈತೆ? ದುಡ್ಡು ಒಂದು ಕೊಟ್ಟುಬಿಟ್ಟರೆ ನಾವು ಯಾವುದಕ್ಕೂ ಸಿದ್ದ. ನಿಮ್ಮ ಸುಖ....ನಿಮ್ಮ ಸಂತೋಸಕ್ಕೆ ನಾವು ಕಲ್ಲು ಆಕೋದಾ ಬುದ್ದೀ!...."

ನಿರಂಜನ ಹೊರಟುಹೋದ. ಅವರಿಬ್ಬರೂ ಅವನು ಮರೆಯಾಗುವವರಿಗೂ ಅವನನ್ನೇ ನೋಡುತ್ತಿದ್ದರು. ಚೆನ್ನಿಯ ಗಂಡ ನಿರಂಜನನೆಸೆದ ರೂಪಾಯಿಗಳನ್ನು ಎತ್ತಿ ರೊಯ್ಯನೆ ಬಿಸಾಡಿದ. ಅವು ಗಾಳಿಯನ್ನು ಸೀಳಿಕೊಂಡು ಹೋದುವು, ಮಸೆದ ಕತ್ತಿ ಆಗದವನ ತಲೆಯನ್ನು ಕೊಚ್ಚುವಂತೆ. ಚೆನ್ನಿ ತಾನೂ ತನ್ನ ಕೈಯಲ್ಲಿದ್ದ ಮುರುಮುರು ಗುಟ್ಟುವ ಕಾಗದವನ್ನು ಹರಿದು ಚೆಲ್ಲಿ, ಅದರ ಮೇಲೆ ಉಗಿದು, ನೆಟಿಕೆ ಮುರಿದಳು. ಮರಿಯನ್ನು ಕಳೆದುಕೊಂಡ ತರುಣದಲ್ಲಿ ಕೆಣಕಲ್ಪಟ್ಟ ಕೇಸರಿಯ ಕಂಗಳಂತಿತ್ತು ಅವಳ ಕಣ್ಣು. ಇಬ್ಬರೂ ಬಹಳ ಹೊತ್ತು ಏನೇನೋ ಮಾತನಾಡಿದರು. ಕೊನೆಗೆ ಇಬ್ಬರ ಮುಖವೂ ಪ್ರಫುಲ್ಲ ವಾಯಿತು.

* * * *

ರಾತ್ರಿ....ಎಂಟು ಎಂಟೂವರೆ ಗಂಟೆ....ಮೃಗಾಲಯದಲ್ಲಿ ನಿಶ್ಶಬ್ದತೆ ನೆಲಸಿತ್ತು .. ಹಗಲಿನಂತೆಯೆ ಈಗಲೂ ಚಿಲುಮೆಯ ನೀರಿನ ಗುಳುಗುಳು ಶಬ್ದ....ಅಲ್ಲಿನ ಗಿಡಬಳ್ಳಿಗಳು ಹಗಲು ಬಿಸಿಲು ಕಾಯಿಸಿಕೊಂಡಂತೆ,

ಈಗ ಬೆಳುದಿಂಗಳಿನಲ್ಲಿ ಅಕ್ಕಪಕ್ಕದ ಸೋದರ ಸೋದರಿಯರೊಡನೆ ತಲೆದೂಗಿ ನಲಿದು ಮಾತನಾಡುತ್ತ, ಗಾಳಿಹಾಡುವ ಜೋಗುಳವನ್ನು ಆಲಿಸಿ ತೂಕಡಿಸುತ್ತಿದ್ದುವು. ಗಂಭೀರವಾಗಿ, ತ ನ್ನ ದೇ ತನ್ನದಾದ ಒಂದು ಗತ್ತಿನಿಂದ ನೀಲದೊಂದೆಡೆಯಿಂದ ಇನ್ನೊಂದೆಡೆಗೆ ತೇಲಿ, ಪ್ರತಿಯೊಂದು ನಕ್ಷತ್ರವನ್ನೂ, ಚಂದ್ರನನ್ನೂ ಅಡಿಗಡಿಗೆ ವಿಚಾರಿಸಿಕೊಳ್ಳುತ್ತಿರುವ ಬಿಳಿಮುಗಿಲ ಹೊತ್ತು....

ಚೆನ್ನಿ ಅದೇ ಸೀರೆ ಉಟ್ಟಿದ್ದಳು. ಹೇಳಿದ್ದ ಕಾಲಕ್ಕೆ ಸರಿಯಾಗಿ ನಿರಂಜನನೂ ಬಂದ. ಬರುವುದೆ ತಡ, ಚೆನ್ನಿ ಅವನನ್ನು ಎದುರುಗೊಂಡಳು. ಚೆನ್ನಿಯ ಗಂಡ ಇಂಗಿತಜ್ಞನಂತೆ ರಂಗದಿಂದ ಜಾರಿದ.

ನಿರಂಜನ ಅ ವ ಳೊ ಡ ನೆ ಚೆಲ್ಲಾಟವಾಡುತ್ತಿದ್ದ. ಇದ್ದಕ್ಕೆ ಇದ್ದಂತೆಯೆ. ಚೆನ್ನಿ ಸರಕ್ಕನೆ ಅವನ ಕೈಯಿಂದ ತಪ್ಪಿಸಿಕೊಂಡು, ನಗುತ್ತ ಓಡತೊಡಗಿದಳು.

ಚೆಲುವಾದ ಬೆಳುದಿಂಗಳು....ತೋಟದ ಹೂಗಿಡಗಳ ಕಡೆಯಿಂದ ಬೀಸುವ ಕಂಪಿನ ತಂಪಾದ ಗಾಳಿ....ಪುಷ್ಟವಾದ ಅಂಗಗಳಿಂದ ಕೂಡಿದ ಹುಡುಗಿ....ಓಡುತ್ತಿದ್ದರೆ ಮೇಲುಸೆರಗು ಜಾರಿದೆ....ಸಿರಿ ಮೊಣಕಾಲಿನ ವರೆಗೂ ಎದ್ದು ಹೋಗಿದೆ....

ನಿರಂಜನ ಅವಳನ್ನು ಹಿಡಿಯಬೇಕೆಂದು ಅವಳ ಹಿಂದೆಯೇ ಓಡಿದ. ಚೆನ್ನಿ ನಿಲ್ಲುತ್ತ, ನಗುತ್ತ, ಅಲ್ಲಿ ಇಲ್ಲಿ ಓಡಿ, ಅವನ ಕೈಗೆ ಸಿಕ್ಕುವಂತೆ ನಟಿಸಿ, ಸಿಕ್ಕಿಯೂ ಸಿಕ್ಕದಂತೆ ತಪ್ಪಿಸಿಕೊಳ್ಳುತ್ತಿದ್ದಳು.

ಹಾಗೆಯೇ ಓಡುತ್ತ ಓಡುತ್ತ, ಕೊನೆಗೆ ಆನೆಯನ್ನು ಕಟ್ಟಿಹಾಕಿದ್ದ ಬಳಿಗೆ ಬಂದು, ಅದರ ಕಾಲ ನಡುವೆ ತೂರಿಹೋದಳು. ದೀಪವೊಂದನ್ನೇ ಕುರಿತೆರಗುವ ದೀಪದ ಹುಳುವಿಯಂತೆ, ಚೆನ್ನಿಯನ್ನೇ ಕುರಿತು ಬರುವ ರಭಸದಲ್ಲಿ, ಸಂಭ್ರಮದಲ್ಲಿ, ನಿರಂಜನ ತಾನೂ ಅಲ್ಲಿಗೆ ಬಂದು, ಆನೆಯ ಕಾಲಬಳಿ ಮುಗ್ಗರಿಸಿ ಬಿದ್ದ.

ಚೆನ್ನಿ "ಭೈರವ! ಭೈರವ!" ಎಂದು ಆನೆಯ ಹೆಸರು ಹಿಡಿದು ಏನೇನೋ ಮಾತುಗಳನ್ನು ಅವಸರವಸರದಿಂದ ಹೇಳಿದಳು. ಅವಳ ಗಂಡನೂ ಅಲ್ಲಿಗೆ ಬಂದು ಅವಳನ್ನು ಕೂಡಿದ.

ಈಗ ಬೆಳುದಿಂಗಳಿನಲ್ಲಿ ಅಕ್ಕಪಕ್ಕದ ಸೋದರ ಸೋದರಿಯರೊಡನೆ ತಲೆ ದೂಗಿ ನಲಿದು ಮಾತನಾಡುತ್ತ, ಗಾಳಿಹಾಡುವ ಜೋಗುಳವನ್ನು ಆಲಿಸಿ ತೂಕಡಿಸುತ್ತಿದ್ದುವು. ಗಂಭೀರವಾಗಿ, ತನ್ನದೇ ತನ್ನದಾದ ಒಂದು ಗತ್ತಿನಿಂದ ನೀಲದೊಂದೆಡೆಯಿಂದ ಇನ್ನೊಂದೆಡೆಗೆ ತೇಲಿ, ಪ್ರತಿಯೊಂದು ನಕ್ಷತ್ರವನ್ನೂ, ಚಂದ್ರನನ್ನೂ ಅಡಿಗಡಿಗೆ ವಿಚಾರಿಸಿಕೊಳ್ಳುತ್ತಿರುವ ಬಿಳಿಮುಗಿಲ ಬೊತ್ತ....

ಚೆನ್ನಿ ಅದೇ ಸೀರೆ ಉಟ್ಟಿದ್ದಳು. ಹೇಳಿದ್ದ ಕಾಲಕ್ಕೆ ಸರಿಯಾಗಿ ನಿರಂಜನನೂ ಬಂದ. ಬರುವುದೆ ತಡ, ಚೆನ್ನಿ ಅವನನ್ನು ಎದುರುಗೊಂಡಳು. ಚೆನ್ನಿಯ ಗಂಡ ಇಂಗಿತಜ್ಞನಂತೆ ರಂಗದಿಂದ ಜಾರಿದ.

ನಿರಂಜನ ಅವಳೊಡನೆ ಚೆಲ್ಲಾಟವಾಡುತ್ತಿದ್ದ. ಇದ್ದಕ್ಕಿದ್ದಂತೆಯೆ. ಚೆನ್ನಿ ಸರಕ್ಕನೆ ಅವನ ಕೈಯಿಂದ ತಪ್ಪಿಸಿಕೊಂಡು, ನಗುತ್ತ ಓಡತೊಡಗಿದಳು.

ಚೆಲುವಾದ ಬೆಳುದಿಂಗಳು....ತೋಟದ ಹೂಗಿಡಗಳ ಕಡೆಯಿಂದ ಬೀಸುವ ಕಂಪಿನ ತಂಪಾದ ಗಾಳಿ....ಪುಷ್ಟವಾದ ಅಂಗಗಳಿಂದ ಕೂಡಿದ ಹುಡುಗಿ....ಓಡುತ್ತಿದ್ದರೆ ಮೇಲುಸೆರಗು ಜಾರಿದೆ....ಸಿರಿ ಮೊಣಕಾಲಿನವರೆಗೂ ಎದ್ದು ಹೋಗಿದೆ....

ನಿರಂಜನ ಅವಳನ್ನು ಹಿಡಿಯಬೇಕೆಂದು ಅವಳ ಹಿಂದೆಯೇ ಓಡಿದ. ಚೆನ್ನಿ ನಿಲ್ಲುತ್ತ, ನಗುತ್ತ, ಅಲ್ಲಿ ಇಲ್ಲಿ ಓಡಿ, ಅವನ ಕೈಗೆ ಸಿಕ್ಕುವಂತೆ ನಟಿಸಿ, ಸಿಕ್ಕಿಯೂ ಸಿಕ್ಕದಂತೆ ತಪ್ಪಿಸಿಕೊಳ್ಳುತ್ತಿದ್ದಳು.

ಹಾಗೆಯೇ ಓಡುತ್ತ ಓಡುತ್ತ, ಕೊನೆಗೆ ಆನೆಯನ್ನು ಕಟ್ಟಿಹಾಕಿದ್ದ ಬಳಿಗೆ ಬಂದು, ಅದರ ಕಾಲ ನಡುವೆ ತೂರಿಹೋದಳು. ದೀಪವೊಂದನ್ನೇ ಕುರಿತೆರಗುವ ದೀಪದ ಹುಳುವಿಯಂತೆ, ಚೆನ್ನಿಯನ್ನೇ ಕುರಿತು ಬರುವ ರಭಸದಲ್ಲಿ, ಸಂಭ್ರಮದಲ್ಲಿ, ನಿರಂಜನ ತಾನೂ ಅಲ್ಲಿಗೆ ಬಂದು, ಆನೆಯ ಕಾಲಬಳಿ ಮುಗ್ಗುರಿಸಿ ಬಿದ್ದ.

ಚೆನ್ನಿ "ಬೈರವ! ಬೈರವ!" ಎಂದು ಆನೆಯ ಹೆಸರು ಹಿಡಿದು ಏನೇನೋ ಮಾತುಗಳನ್ನು ಅವಸರವಸರದಿಂದ ಹೇಳಿದಳು. ಅವಳ ಗಂಡನೂ ಅಲ್ಲಿಗೆ ಬಂದು ಅವಳನ್ನು ಕೂಡಿದ.

ನಿರಂಜನನಿಗೆ ಆನೆಯ ಸೊಂಡಿಲು ತಾಕಿತು ಹಾ!.... ಮನುಷ್ಯನ ಆರ್ತನಾದ! ...ನಿರಂಜನನದೇ !....ಏನೋ ನೆಲಕ್ಕೆ ಅಪ್ಪಳಿಸಿದ ಸದ್ದು ! ಆನೆಯ ಘೀಂಕಾರ!....ಒಂದು ಸಾರಿ, ಎರಡು ಸಾರಿ....ನೆಲದಲ್ಲಿ ಏನನ್ನೋ ಹೊಸಗಿದಂತಾಯ್ತು ! ...ನಿಶ್ಶಬ್ದ....ವಿಕಾರವಾಗಿ ಅಟ್ಟಹಾಸದಿಂದ ನಕ್ಕಂತೆ ಧ್ವನಿಯಾಯ್ತು !...

* * * *

ಮರುದಿನ "ಸಿರಿಪುರದ ವಾರ್ತಾತರಂಗ"ದಲ್ಲಿ ಈ ರೀತಿಯಿತ್ತು :

"ಶ್ರೀಯುತ ನಿರಂಜನರು ನಮ್ಮ ಸಿರಿಪುರದ ಮೃಗಾಲಯದ ಮುಖ್ಯಾಧಿಕಾರಿಗಳು. ಬಹಳ ಗುಣಯುತರು. ಉದಾರಿಗಳು. ಇಂತಹ ದೊಡ್ಡ ಗೃಹಸ್ಥರು, ನಿನ್ನೆ ರಾತ್ರಿ, ಮೇಲೆ ಹೇಳಿದ ಮೃಗಾಲಯದ ಭೈರವನೆಂಬ ಆನೆಯ ಕಾಲಕೆಳಗೆ ಸಿಕ್ಕಿ ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ನೆನ್ನೆ ರಾತ್ರಿ ಆ ಆನೆಯನ್ನು ನೋಡಿಕೊಳ್ಳುವ ಸೋಲಿಗರು ಪಕ್ಕದ ಗುಡಿಸಿಲಿನಲ್ಲಿ ನಿದ್ರೆ ಮಾಡುತ್ತಿದ್ದರೆಂದೂ, ಕೆಲವು ದಿನಗಳಿಂದ ಆನೆಗೆ ಏನೋ ದೇಹಾಲಸ್ಯವಿದ್ದುದರಿಂದ ಶ್ರೀಯುತರು ಅದಕ್ಕೆ ಚಿಕಿತ್ಸೆಮಾಡಲೆಳಸಿ ಅಲ್ಲಿಗೆ ಹೋಗಿ, ನಿದ್ರಿಸುವ ಕಾವಲಿನವರನ್ನು ಎಚ್ಚರಗೊಳಿಸಲು ಮನಸ್ಸಿಲ್ಲದೆ, ಅನ್ಯಾಯವಾಗಿ ಅಕಾಲಮೃತ್ಯುವಿಗೆ ತುತ್ತಾದರೆಂದೂ ತಿಳಿದುಬಂದಿದೆ. ಇದರಿಂದಲೇ ದುಷ್ಟರಿಗೆ ಉಪಕಾರ ಮಾಡುವುದು ಎಷ್ಟು ಅಪಾಯಕರವೆಂಬುದು ವ್ಯಕ್ತವಾಗುತ್ತದೆ. ಇನ್ನು ಮೇಲೆ ಇಂತಹ ಅಸಂದರ್ಭಗಳು ಒದಗದಂತೆ ಮೃಗಾಲಯದವರು ಜಾಗರೂಕರಾಗಿರುವರೆಂದು ನಂಬುತ್ತೇವೆ. ದೇವರು ಶ್ರೀಯುತ ನಿರಂಜನರ ಅತ್ಮಕ್ಕೆ ಶಾಂತಿಯನ್ನಿತ್ತು. ಅವರ ಕುಟುಂಬದ ದುಃಖಶಮನಮಾಡಲೆಂದು ಹಾರೈಸುತ್ತೇವೆ."

ಇದನ್ನು ಓದಿದವರೊಬ್ಬರು, ನಿರಂಜನನನ್ನು ಕರತಲಾಮಲಕವಾಗಿ ಬಲ್ಲವರು, ಮನುಷ್ಯರ ನಡೆವಳಿಕೆಯಲ್ಲಿ ನಂಬಿಕೆ ತಪ್ಪಿದವರು, ಆ ದಿನ ಸಂಜೆ, "ಆದರಿಂತಹುದೆಷ್ಟೊ ಆಗಲೆಬೇಕಲ್ಲ" ಅಂತ ಲಾವಣಿ ಮಟ್ಟು ಎಳೀತಾ ಇದ್ದರು.

# ಅನಿಷ್ಟಕ್ಕೆ ಶನೀಶ್ವರ ಗುರಿ.

— ೧ —

(ಸುಶೀಲೆ ತನ್ನ ಗಂಡನಿಗೆ ಬರೆದ ಕಾಗದ)

ಸಿರಿಪುರ

೮–೯–೨೬

ಮ|| ರಾ|| ಯವರಲ್ಲಿ ಶೀಲಾ ಮಾಡುವ ವಿಜ್ಞಾಪನೆಗಳು.

.... .... .... .... ನಿಮ್ಮ ಆಕ್ಷೇಪಣೆಯ ಪತ್ರವನ್ನು ಕಂಡು ಮನಸ್ಸಿಗೆ ಕಿರಿಕಿರಿಯಾದರೂ, ನಿಮ್ಮನ್ನು ನಾನು ಪ್ರೀತಿಸುತ್ತೇನಾಗಿ ಈ ಕಾಗದ ಬರೆಯುತ್ತಿದ್ದೇನೆ. ಅಲ್ಲ, ನೀವು ಹೆಸರಿಗೆ ಹೆಂಡತಿಯೆಂದು ಮದುವೆಯಾಗಿ, ಹತ್ತಾರು ವರ್ಷ ಲಂಡನ್ನಿನಲ್ಲಿ ಹೋಗಿ ನಿಂತು, ಈಗ ನನ್ನನ್ನು ಆಡಿದರೆ ನನ್ನ ತಪ್ಪೇ? ನಾನೇನು ಮನುಷ್ಯಳಲ್ಲವೆ? ಇಷ್ಟಾಗಿ ಲಂಡನ್ನಿನಲ್ಲಿ ನೀವೇನೇನು ಮಾಡಿದ್ದೀರೋ ನನಗೆ ಗೊತ್ತೆ! ಆದೆಲ್ಲ ಈಗ ಬೇಡ....

ನೀವು ಊಹಿಸಿರುವುದು ಸರಿ. ಹೌದು, ಇ. ಟಿ. ರಾಯರು. ಇದೇ ಸಮಯದಲ್ಲಿ, ನೀವು ಎರಡು ವರ್ಷದ ಹಿಂದೆ ಬರೆದ ಕಾಗದವನ್ನು ನಿಮಗೆ ನೆನಪು ಕೊಡುವುದು ಒಳ್ಳೆಯದು. ನನ್ನ ಸ್ನೇಹಿತೆ ಮಾಲು ಇದೇ ಇ. ಟಿ. ರಾಯರ ಜತೆಯಲ್ಲಿ ಒಂದು ವಾರ ಎಲ್ಲಿಯೋ ಹೋಗಿದ್ದಳೆಂದುದಕ್ಕೆ ನೀವೇನು ಬರೆದಿದ್ದಿರಿ, ನೆನಪಿದೆಯೆ? "ಇ. ಟಿ. ರಾಯರ ಜತೆಯಲ್ಲಿ ಯಾರು ಬೇಕಾದರೂ ಹೋದಾರು. ನಾನು ಹೆಂಗಸಾಗಿದ್ದಿದ್ದರೆ ನಾನೂ ಹೋಗುತ್ತಿದ್ದೆ!" ನಾನು ಆ ಕಾಗದವನ್ನು ಬಹಳ ಜೋಪಾನವಾಗಿ ಓದಿ, ಹಿಂದುಮುಂದು ನೋಡಿ ನಡೆದಿದ್ದೇನೆ. ನಾನೇನೂ ಓಡಿ ಹೋಗಿಲ್ಲ. ಜೊತೆಗೆ, ರತ್ನದಂತಹ ಒಂದು ಮಗುವಿದೆ. ಈಗ ಕೂಗಾಡಿದರೆ ಏನು ಬಂತು? ಮುಂದೇನು ಮಾಡಬೇಕೆನ್ನುತ್ತೀರಿ? ಪ್ರಪಂಚಕ್ಕೆಲ್ಲ ಡಂಗುರ ಹೊಯ್ಯುತ್ತೀರೇನು? ಏನು ಬಂದ ಹಾಗಾಯಿತು? ನಾನೆಲ್ಲೋ ನಮಗೆ ಬಿ. ಎ.ಗೆ ಇಟ್ಟಿದ್ದ ಪುಸ್ತಕದಲ್ಲಿ ಓದಿದ್ದೆ: "ಗಿಡದಲ್ಲಿ ಬಿಟ್ಟ ಹಣ್ಣು ಗಿಡವನ್ನು ಪಡೆದವನದಲ್ಲ; ಹಣ್ಣನ್ನು ಕಿತ್ತು ತಿನ್ನುವವನದು" ಎಂದು.

ಮುಖ್ಯ ನಾನು ಹೇಳುವುದಿಷ್ಟು; ನಾನೇನೂ ದೇವತೆಯಲ್ಲ, ಸಂನ್ಯಾಸಿನಿಯಲ್ಲ. ಈ ಸಿರಿಪುರ ಬಿಟ್ಟರೆ ಪ್ರಪಂಚದಲ್ಲಿ ಬೇರೆ ಊರೇ ಇಲ್ಲವೆನ್ನುತ್ತೀರೇನು?....

ಎಲ್ಲವನ್ನೂ ಬರೆದಿದ್ದೇನೆ. ಸಾವಕಾಶವಾಗಿ ಯೋಚಿಸಿ, ಕಾಗದ ಬರೆಯಿರಿ. ದುಡುಕಬೇಡಿ.

ಇತಿ ನಿಮ್ಮವಳೆ
ಶೀಲಾ

* * * *

— ೨ —

ಸಿರಿಪುರ
೧೬-೫-೩೧

ತೀ|| ರೂ|| ತಂದೆಯವರಲ್ಲಿ ಸುಬ್ಬನ ನಮಸ್ಕಾರಗಳು.

ಆದಾಗಿ ಉಭಯಕುಶಲೋಪರಿ ಸಂಪ್ರತಿ. ಇದ್ದ ಆಶೆಯು ನೆರಳೂ ಮರೆಯಾಯಿತು. ಗಂಗವ್ವು ಇಂದು ಗಂಡುಕೂಸು ಹಡೆದಳು. ಈಗ ಹತ್ತು ತಿಂಗಳ ಹಿಂದೆ ನಮ್ಮ ರೇವಣ್ಣ ಸತ್ತಾಗ, ಅವನ ಹೆಂಡತಿ ಗಂಗವ್ವನಿಗೆ ಮಕ್ಕಳಿಲ್ಲದ್ದರಿಂದ ಅವನ ಆಸ್ತಿ ನಮಗೇ ಬರಬೇಕಾಗಿತ್ತಲ್ಲವೆ? ಆದರೆ ಆಗ ಗಂಗವ್ವು ತಾನು ಗರ್ಭಿಣಿಯೆಂದದ್ದರಿಂದ ಕಾಲವನ್ನು ಕಾಯಬೇಕಾಯಿತು. ರೇವಣ್ಣ ಹಾಸಿಗೆ ಹಿಡಿದು ಒಂದು ವರ್ಷದ ಮೇಲಾಗಿರುವಾಗ ಈ ಆಶ್ಚರ್ಯ ಏನೆಂದು ನೀವು ಕೇಳಬಹುದು. ಅದರ ಗುಟ್ಟು ನನಗೆ ಗೊತ್ತು.

ರೇವಣ್ಣ ಸತ್ತ ಮೂರನೆಯ ದಿನ, ಗಂಗವ್ವನೆದುರು ಸಿರಿಪುರದ ಅಮಲದಾರರು ಇ. ಟಿ. ರಾಯರು, ಇನ್ನೊಂದು ಹತ್ತು ತಿಂಗಳೊಳಗಾಗಿ ಅವಳಿಗೆ ಮಗುವಾದರೆ, ಆಸ್ತಿ ಅವಳ ಕೈಬಿಟ್ಟು ಹೋಗುವುದಿಲ್ಲವೆಂದು ಹೇಳುತ್ತಿದ್ದುದನ್ನು ನಾನೇ ಕಿವಿಯಾರ ಕೇಳಿದೆ. ಇದಾದ ಮೇಲೆ ಕೆಲವು ರಾತ್ರಿಗಳು ಗಂಗವ್ವು ಇ.ಟಿ. ರಾಯರ ಮನೆಗೆ ಹೋಗುತ್ತಿದ್ದುದೂ ನನಗೆ ಗೊತ್ತು. ಆದರೇನು! ನಾವು ಬಾಯಿಬಿಡುವ ಹಾಗಿಲ್ಲ. ಈ ವಿಚಾರವನ್ನು ಹೊರಗೆಳೆದರೆ, ಸತ್ತ ರೇವಣ್ಣನ ಮಾನವೇನಾಯಿತು? ಅದರಿಂದ ನಮ್ಮ

ಮಾನವೇನಾಯಿತು ? ಮಾನವನ್ನು ಕಳಕೊಂಡು ಹಣ ಸಂಪಾದಿಸಬೇಕೆ? ಶಿವ ಕೊಟ್ಟ ಗಂಜಿಯೆ ಸಾಕು. ಅಲ್ಲದೆ ನಾವು ಬಡವರು. ಸಾಹೇಬರು ಇ. ಟಿ. ರಾಯರ ಎದುರು ನಿಂತರೆ ನಮ್ಮನ್ನು ಸಡ್ಡೆ ಮಾಡುವವರಾರು? ಈ ಎಲ್ಲ ಕಾರಣಗಳಿಂದ, ನಮ್ಮ ಬಡತನವೇ ನಮಗೆ ಭಾಗ್ಯವೆಂದೂ, ಮಾಡಿದವರ ಪಾಪ ಆಡಿದವರ ಬಾಯಲ್ಲೆಂದೂ ನಾನು ಸುಮ್ಮನಿದ್ದರೆ, ನಾನು ಸರಿಯಾಗಿ ನಡೆದಿರುವೆನೆಂದಲ್ಲದೆ ತಾವು ಅನ್ಯಥಾ ಹೇಳಲಾರಿರೆಂದು ನಂಬಿದ್ದೇನೆ. ಇದರ ಮೇಲೆ ತಾವು ಸೂಕ್ತವಿದ್ದಂತೆ ಹಿತವಾದ ಬರೆಯುವುದು.

ಇಂತೀ ನಮಸ್ಕಾರಗಳು

ಸುಬ್ಬ

* * * *

— ೩ —

(ಶಾಮರಾವ್ ತನ್ನ ಸ್ನೇಹಿತನಿಗೆ ಬರೆದ ಕಾಗದ)

ಸಿರಿಪುರ

೧೯—೧೦—೩೨

ರಂಗಣ್ಣ,

ನಿನ್ನ ಕಾಗದ ಬಂತು. ನನಗೆ ಬಹಳ ಜಂಭ ಬಂದಿದೆ, ಎನ್ನುತ್ತೀಯೆ. ಯಾವ ಮಹಾಪದವಿ ಬಂದಿರುವುದಕ್ಕೆ ಜಂಭ ಬರಬೇಕು? ಹೌದು. ನಾನು ಅಮಲದಾರರ ಹೆಡ್‌ಕ್ಲಾರ್ಕ್. ಅರುವತ್ತು ರೂಪಾಯಿ ಸಂಬಳ ಬರುತ್ತೆ! ಆದರೆ, ರಂಗಣ್ಣ, ನನ್ನ ಪದವಿ ನನ್ನ ಶತ್ರುವಿಗೂ ಬೇಡ. ನಮ್ಮ ಅಮಲದಾರರ ಕಚೇರಿಯಲ್ಲಿ ಹೆಡ್‌ಕ್ಲಾರ್ಕ್ ಕೆಲಸ ಏನು ಗೊತ್ತೆ? ಮಿಕ್ಕ ಅಮಲದಾರರ ಹೆಡ್‌ಕ್ಲಾರ್ಕುಗಳು ಮಾಡುವ ಕೆಲಸಗಳಲ್ಲದೆ ಬೇರೆ ಇನ್ನೂ ಕೆಲವು ಕೆಲಸ ಉಂಟು. ನೋಡು, ನಮ್ಮ ಅಮಲದಾರರು ದಿನಕ್ಕೊಂದು ಊರು ಜಮಾಬಂದಿಗೆ ಹೋಗುತ್ತಾರೆ. ಅವರು ಹೊರಡುವ ಹಿಂದಿನ ದಿವಸ ನಾನು ಹೋಗಬೇಕು. ಹೋಗುವಾಗ ಅವರ ಪೆಟ್ಟಿಗೆಯೊಂದನ್ನು ಹೊತ್ತುಕೊಂಡು ಹೋಗಬೇಕು. ಆ ಪೆಟ್ಟಿಗೆಯಲ್ಲೇನಿದೆ ಗೊತ್ತೆ, ರಂಗಣ್ಣ? ಒಂದು ಥಳಕಿನ ಸೀರೆ, ಕುಪ್ಪಸ,

ಇವಿಾಟೇಷನ್ ಒಡವೆ ಹಿತ್ತಾರು; ಒಂದು ಜತೆ ಸೆಂಟು ಬಾಟಲು. ನಾನು ಹೋಗಿ, ಸರಿಯಾದ ಪಾತ್ರವನ್ನು ಆರಿಸಿ, ಮೈ ಕೈ ತೊಳೆಯಿಸಿ, ವೇಷಭೂಷಣಗಳನ್ನ ಳವಡಿಸಿ. ಅಮಲದಾರರು ಬರುವವೇಳೆಗೆ ಸಿದ್ಧಪಡಿಸ ಬೇಕು. ಒಂದು ಕಡೆ ನಗು ಬರುತ್ತದೆ, ಒಂದು ಕಡೆ ಅಳು ಬರುತ್ತದೆ, ರಂಗಣ್ಣ. ನನಗೆ ಏನಿಲ್ಲವೆಂದರೂ ತಿಂಗಳಿಗೆ ಇಪ್ಪತ್ತು ದಿವಸ ಈ ಕೆಲಸ ವಿರುತ್ತದೆಂದರೆ, ನನ್ನ ಪದವಿಯಲ್ಲಿ ನನಗೆಷ್ಟು ಜಂಭವಿರಬೇಕು, ಹೇಳು! ವ್ಯವಧಾನವಿಲ್ಲದೆ ನಿನಗೆ ಕಾಗದ ಬರೆಯಲಿಲ್ಲವಲ್ಲದೆ ಬೇರೆಯಲ್ಲ. ಇ. ಟಿ. ರಾಯರ ಹೆಸರನ್ನು ಕೇಳಿದ್ದೀಯಾ ನೀನು? ಕೇಳಿಲ್ಲದಿದ್ದರೆ ತಿಳಿದುಕೋ. ಅವರೇ ನಮ್ಮ ಸಾಹೇಬರು.

ಆದರೆ, ನಾನೇಕೆ ಈ ಕೆಲಸ ಮಾಡುತ್ತೇನೆಂದು ನೀನು ಕೇಳ ಬಹುದು. ಒಂದು: ಅರುವತ್ತು ರೂಪಾಯಿ ಬರುತ್ತೆ. ಎರಡು: ಎಂತಹ ಕೆಲಸವಾದರೂ ಸರಿಯೆ, ನಾನೆಷ್ಟು ಅವನತಿಯನ್ನನುಭವಿಸಿದರೂ ಸರಿಯೆ, ತಾಯಿಲ್ಲದ ನನ್ನ ಮಗುವನ್ನು ಸುಖವಾಗಿರಿಸಬೇಕೆಂದು ಇಷ್ಟು ಒದ್ದಾಡುತ್ತಿದ್ದೇನೆ. ಸೋಮನಪೇಟೆಗೆ ಹೋಗಲು ಹೊತ್ತಾಯಿತು, ರಂಗಣ್ಣ. ಪುನಃ ಬರೆಯುತ್ತೇನೆ.

ನಿನ್ನ,
ಶಾಮರಾವ್

* * * *

— ೪ —

(ಪಾತು ರುಕ್ಕುಗೆ ಬರೆದ ಕಾಗದ)

ಸಿರಿಪುರ
೪—೬—೩೩

ರುಕ್ಕು,

ನಿನಗೆ ಕಾಗದ ಬರೆದು ಓಬೀರಾಯನ ಕಾಲವಾಯಿತಲ್ಲವೇನೆ. ಉಪ್ಪು ಹುಳಿ ಕಾರ ಇಲ್ಲದೆ ಅದೆಂತ ಕಾಗದ ಬರೆಯೋದೆ? ಈಗ ಅಂದರೆ, ಉಪ್ಪು, ಹುಳಿ, ಕಾರ, ಜತೆಗೆ ಒಗ್ಗರಣೇನೂ ಇದೆ. ಶಾಕೂಗೆ ಇನ್ನೂ ಒಂದು ಮಗು ಕಣೆ! ಹೆಣ್ಣು! ಶಾಕೂ ಯಾರು ಜ್ಞಾಪಕ ಇದೆಯೇನೆ?

ಇ. ಟಿ. ರಾಯರ ಹೆಂಡತಿ. ಜ್ಞಾಪಕ ಇದೆಯೇನೆ, ೧೯೧೪ರಲ್ಲಿ ಅವರಿಗೆ ಮದುವೆ ಆದ್ದು! ಅಲ್ಲವೆ, ೧೯೧೬ ರಿಂದ ೧೯೩೨ ಅಂದರೆ ೧೬ ವರ್ಷಕ್ಕೆ ೬ ಗಂಡು! ೭ ಹೆಣ್ಣು! ಶುದ್ಧಮೃಗಗಳು! ಲೇ, ಸಮಾಚಾರ ಮುಗೀತು. ಈ ಸುದ್ದಿ ಕಾರ್ಡಿನಲ್ಲಿ ಬರೀಬಾರದು ಅಂತ ಕವರಿನಲ್ಲಿ ಬರೆದಿದ್ದೇನೆ.

ಶಾಕೂಗೆ ಮಗು ಹುಟ್ಟಿದ್ದನ್ನು ಊರಲ್ಲಿ ಎಲ್ಲರಿಗೂ ಹೇಳು. ಮರೀ ಬೇಡ. ಅಯ್ಯೋ ಪಾಪ!

ಪಾತು.

* * * *

— ೫ —

(ಸಿರಿಪುರದ 'ವಾರ್ತಾತರಂಗ'ದ ಸುದ್ದಿ)

**ಸಿರಿಪುರದ ವಾರ್ತಾತರಂಗ**

ಸಂಪುಟ ೪. ೨೫_೯_೧೯೩೨ ಸಂಚಿಕೆ ೪೫

## ದೈವಕ್ಕೆ ಕಣ್ಣಿಲ್ಲ

ನಮ್ಮ ಪತ್ರಿಕೆಯ ಘನಪ್ರೋಷಕರೂ, ಸಿರಿಪುರದ ಮಾನ್ಯ ಅಮಲ ದಾರರೂ ಆದ ಶ್ರೀಮಾನ್ ಇ. ಟಿ. ರಾಯರು ಈ ದಿನ ಬೆಳಗ್ಗೆ ೧೦|| ಗಂಟೆಯಲ್ಲಿ ಪರಶಿವನ ಪಾದಧೂಳಿಯಲ್ಲಿ ಐಕ್ಯರಾಗಲು, ಕೈಲಾಸಗಿರಿವರದ ತುಂಗಶೃಂಗಗಳನ್ನು ಏರಿದರೆಂದು ತಿಳಿಸಲು ಬಹಳ ವಿಷಾದಪಡುತ್ತೇವೆ. ಶ್ರೀಯುತರು ತಮ್ಮ ಅಮಲದಾರಗಿರಿಯಲ್ಲಿ ಎಲ್ಲರ ಪ್ರೀತಿಯನ್ನೂ ಸಂಪಾದಿಸಿಕೊಂಡು ಪ್ರಜೆಗಳಿಗೆ ಅಚ್ಚುಮೆಚ್ಚಾಗಿದ್ದರು. ಇವರ ಅಕಾಲ ಮರಣದಿಂದ ಇಡೀ ಸಿರಿಪುರವೇ ಶೋಕಪಾಷಾಣದ ಕೆಳಗೆ ಸಿಕ್ಕಿಹೋಗಿದೆ. ಎಷ್ಟು ಹೇಳಿದರೇನು! ನಾವು ಹುಲುಮನುಜರು ಏನು ಮಾಡಲು ಸಾಧ್ಯ? ಎಲ್ಲವೂ ದೈವೇಚ್ಛೆ. ಮುಖ್ಯ ಆ ದೈವಕ್ಕೆ ಕಣ್ಣಿಲ್ಲ. ಆ ಪಾಪಿ ದೈವಕ್ಕೆ ಕಣ್ಣಿದ್ದಲ್ಲಿ ಶ್ರೀಯುತರ ಜೀವನಯಾತ್ರೆಯನ್ನು ಅವರ ೪೦ನೇ ವಯಸ್ಸಿನಲ್ಲಿಯೇ ಕೊನೆಗಾಣಿಸುತ್ತಿರಲಿಲ್ಲ. ಶ್ರೀಯುತರ ಪರಲೋಕ ಪ್ರಯಾಣಕ್ಕೆ ನಾವು ಕಣ್ಣೀರಿಡುತ್ತ, ಅವರ ಕುಟುಂಬದ ಅಪಾರವಾದ ದುಃಖಸಾಗರದಲ್ಲಿ ನಾವೂ ಭಾಗಿಗಳೆಂದು ಮಾತ್ರ ಹೇಳಬಲ್ಲೆವು.

## ೨೪—೨—೩೦

---

**೨—೨—೩೦**

> "ಹೆಣ್ಣಿನಿಂದ ಮಾನವನಿಗೆ ಎಂದೂ ತೊಂದರೆಯೇ. ಅವಳು ಚೆಲುವೆಯಾದರೆ, ಅವಳನ್ನು ಪಡೆಯಬೇಕೆಂಬಾಸೆಯನ್ನು ಇತರರಲ್ಲಿ ಉಂಟುಮಾಡುವಳು; ಅವಳ ಗಂಡ ಪ್ರೇಮಸಂಶಯಕ್ಕೆ ಸಿಲುಕುತ್ತಾನೆ. ಅವಳು ಕುರೂಪಿಯಾಗುವಳೆ, ಅವಳ ಗಂಡ ಇತರರನ್ನು ನೋಡಿ ಅಸೂಯೆಪಟ್ಟು, ಆ ಅಸೂಯೆಯಿಂದ ತೊಂದರೆ ಬೀಳುತ್ತಾನೆ. ಒಂದು ವೇಳೆ ಅವಳು ಸುರೂಪಿಯೂ ಅಲ್ಲದೆ, ಕುರೂಪಿಯೂ ಅಲ್ಲದಿದ್ದಲ್ಲಿ, ಪುರುಷನು ಅವಳು ಸುಂದರಿಯೆಂದು ಭಾವಿಸಿಕೊಂಡು, ತಾನು ತಪ್ಪು ಮಾಡಿರುವೆನೆಂದು ತಿಳಿದುಕೊಂಡು, ಅದಕ್ಕಾಗಿ ಒದ್ದಾಡುತ್ತಾನೆ. ಇಷ್ಟೆಲ್ಲ ಒಬ್ಬ ಹೆಂಗಸಿನಿಂದ."—ಗಾರ್ಕಿ

ನನಗೆ ಮದುವೆಯಾಗಿ ಇಂದಿಗೆ ಸರಿಯಾಗಿ ಎರಡು ವರ್ಷ ಆಯಿತು. ಈ ಎರಡು ವರ್ಷ ಪ್ರತಿದಿನವೂ ನನ್ನ ಮನಸ್ಸಿನಲ್ಲಿ ಏನು ಹೊಳೆಯುತ್ತಿತ್ತೋ ಅದನ್ನೇ ಈ ಗಾರ್ಕಿಯೂ ಹೇಳಿದ್ದಾನೆ....ಆದರೆ ನಾನು ಸರಸ್ವತಿಯನ್ನು ಪ್ರೀತಿಸದಿರುವುದು ಯಾರ ತಪ್ಪು? ನನ್ನದೆ?....ತಾಯಿಗಾಗಿ ಸಮ್ಮತಿಸಬೇಕಾಯಿತು. ಅಪ್ಪ ಸತ್ತು ಮೂರು ವರ್ಷವಾಗಿತ್ತು. ನನಗೆ ಕೆಲಸವಾಗಿ ಆರು ತಿಂಗಳಾಗಿತ್ತು. ಅಮ್ಮ ಈ ಮದುವೆ ಏರ್ಪಡಿಸಿದಳು. ಅವಳ ಮಾತಿಗೆ ಬದಲು ಹೇಳುವ ಧೈರ್ಯ ಇರಲಿಲ್ಲ. ಅದಕ್ಕಾಗಿ, ಗಂಡನಿಲ್ಲದ ಹೆಂಗಸಾದ ನನ್ನ ತಾಯನ್ನು ತೃಪ್ತಿಪಡಿಸುವುದಕ್ಕಾಗಿ, ನಾನು ಈ ಮದುವೆ ಮಾಡಿಕೊಂಡುದಕ್ಕೆ ಈಗ ಅನುಭವಿಸಬೇಕೇ! ಅವಳಿಗೆ ನಾನೂ ವ್ಯತಿರಿಕ್ತವಾಗಿ ನಡೆದಿದ್ದರೆ, ಅವಳಿಗೆ ಹಿತಚಿಂತಕರು ಯಾರು? ಇದ್ದವನೊಬ್ಬ ಮಗ. ಒಪ್ಪಬೇಕಾಯಿತು....ನನಗಾಗಲಿ ಸರಸ್ವತಿಗಾಗಲಿ ಈ ಮದುವೆಯಿಂದ ಏನು ಸುಖ? ಅವಳೇನೊ ಮನಃಪೂರ್ವಕ ನನ್ನನ್ನು ಪ್ರೀತಿಸುತ್ತಾಳೆ. ಆದರೆ ನಾನು ಪ್ರೀತಿಸಲಾರೆ. ಪ್ರೀತಿಸಬೇಕು....ಗೊತ್ತು....ಆದರೆ ಅಯ್ಯೋ! ಅವಳನ್ನು ನೋಡಿದರೆ,

ಹೆಂಚಿಕಡ್ಡಿಗೆ ಸೀರೆ ಸುತ್ತಿದಂತಿದೆ. ಗೆದ್ದಲು ತಿಂದ ಪುಸ್ತಕದ ಹಾಗಿದೆ ಅವಳ ಮುಖ. ತುಟಿ....ಅಬ್ಬಾ! ಆದರೆ ಅದು ಅವಳ ತಪ್ಪೆ? ನಾನು ಕಂಡೂ ಕಂಡೂ ತಾಯಿಯ ತೃಪ್ತಿಗಾಗಿ ಮಾಡಿಕೊಂಡೆ. ಮಾಡಿ ಕೊಂಡದ್ದಕ್ಕೆ ಪ್ರೀತಿಸಬೇಕು. 'ಈಸಬೇಕು, ಇದ್ದು ಜೈಸಬೇಕು!' ದೇವರೇ ನನಗೆ ಧೈರ್ಯ ಕೊಡಬೇಕು.

* * * *

೩—೨—೩೦

ಈ ದಿನ ಮಾವನವರಿಂದ ಕಾಗದ ಬಂತು. ಇದೇ ತಿಂಗಳು ೨೪ಕ್ಕೆ ನಮ್ಮ ಶಾಂತಿಪ್ರಸ್ತ ನಿಷ್ಕರ್ಷೆಯಾಗಿದೆಯಂತೆ! ಅಮ್ಮನಿಗೋ, ಹಿಡಿಸ ಲಾರದ ಸಂತೋಷ. ನನ್ನ ಒಳಗುದಿ ಯಾರಿಗೆ ಹೇಳಲಿ! ಜನರು ನನ್ನ ಗೆಲವಿನ ಮುಖ ಕಂಡು, 'ಇವನಿಗೇನಪ್ಪ ರಾಜ' ಎನ್ನುತ್ತಾರೆ. ನನ್ನ ಸಂಕಟ ತೋಡಿಕೊಂಡರೆ, ಯಾವ ಮಗ ನನಗೆ ಸಹಾಯವಾಗಿ ನನ್ನ ಸಂಕಟನಿವಾರಣೆ ಮಾಡುವವನು? ಇವರೆಲ್ಲ ಮಾಡುವುದೆಂದರೆ 'ಅಯ್ಯೋ ಪಾಪ' ಎಂದಾರು. ಈ 'ಅಯ್ಯೋಪಾಪ'ದಿಂದ ನನ್ನ ಬೇಗೆಯಡಗುವು ದಾದರೆ, ಬೇಕಾದಷ್ಟು ಗೋಳಾಡುತ್ತಿದ್ದೆ.

ಆಗಬಹುದೆಂದು ಮಾವನವರಿಗೆ ಮರುಮಾತು ಬರೆದೆ. ೨೪ರ ನೆನಪು ಬಂದು ಅನ್ನ ಸಹ ಸೇರಲಿಲ್ಲ. ಅಮ್ಮ ಎಂದಳು–ನನಗೆ ಸಂತೋಷ ವುಕ್ಕುತ್ತಿರುವಾಗ ಅನ್ನವೆಲ್ಲಿಬೇಕಾಗುವುದೆಂದು. ಪಾಪ! ಅವಳ ಸವಿ ಗನಸನ್ನು ನಾನೇಕೆ ಚೆದರಿಸಬೇಕು?....ನಾನು ಮಾಡುವ ಗುಮಾಸ್ತೆ ಗಿರಿ ನನಗೆ ಸಂತೋಷವೆ? ಇಲ್ಲ. ಅದು ನಾನು ಅನ್ನದ ಸಂಪಾದನೆಗೆ ಮಾಡಬೇಕಾದ ಕರ್ತವ್ಯ. ಹಾಗೆಯೇ ನಾನು ಈಗ ಒಪ್ಪಿದುದೂ ಮದುವೆಯಾದುದಕ್ಕಾಗಿ ಮಾಡಬೇಕಾದ ಕರ್ತವ್ಯ.

ಅಯ್ಯೋ! ನಾನು ಮದುವೆ ಮಾಡಿಕೊಳ್ಳದಿದ್ದಿದ್ದರೆ ಎಷ್ಟು ಚೆನ್ನಾ ಗಿರುತ್ತಿತ್ತು!....ಅದಕ್ಕಿಂತ ನನ್ನ ತಂದೆಗೇ ಮದುವೆಯಾಗದಿದ್ದಿದ್ದರೆ....!

* * * *

೪—೨—೩೦

ಈ ದಿನ ಬೆಳಗ್ಗೆ ರೂಂನಲ್ಲಿ ಕುಳಿತು ಬೀದಿಯಲ್ಲಿ ಕೊಳದ ಕಡೆಗೆ

ನೀರಿಗೆ ಹೋಗುವ ಹೆಂಗಸರನ್ನು ಕಂಡೆ, ಆ ಮಯೂರಾ ಕಲರ್ ಸೀರೆ ಯುವಳು! ನನಗೆ ಅವಳನ್ನು ಮದುವೆಯಾಗುವ ಯೋಗವಿದ್ದಿದ್ದರೆ! ಆ ೨೪ ಇಂದೇ ಬರಬಾರದೇ! ಬದುಕು ಎಷ್ಟು ಸವಿಯಾಗಿರುತ್ತಿತ್ತು!

ಛಿ! ನಾನು ಮದುವೆಯಾದವನು. ೨೪ರಿಂದ ನನ್ನ ಹೆಂಡತಿ ಯೊಡನೆ ಸಂಸಾರ ಮಾಡಬೇಕು. ಬೀದಿಯ ಹೆಂಗಸರ ಮೇಲೆ ನಾನು ಕಣ್ಣು ಹಾಕುವುದೆ? ಎಂತಹ ಕೆಲಸ! ಇದು ಪಾಪ! ನಾನು ಹೀಗೆ ಮಾಡಿದರೆ ನನ್ನ ಹೆಂಡತಿಯೇಕೆ ಬೇರೆಯುವರನ್ನು ನೋಡಬಾರದು? ಅದೂ ಪಾಪ!....ಇಷ್ಟಕ್ಕೂ ಅವಳ ರೂಪಿಗೆ ಮೆಚ್ಚುವವರಾರು?

ಅಯ್ಯೋ! ಏನಿದೀ ಹಾಳು ಯೋಚನೆಗಳು! ಈಚೆಗೆ ಏಕೆ ಹೀಗಾಯ್ತು ನನ್ನ ಮನಸ್ಸು! ಕೈ ಹಿಡಿದವಳನ್ನು ತೃಪ್ತಿಪಡಿಸಬೇಕಾ ದುದು ನನ್ನ ಕರ್ತವ್ಯ--ಯಾವ ಕರ್ತವ್ಯಕ್ಕೆ ಶರಣಾಗಿ ತಾಯಿಯ ಮಾತಂತೆ ಮದುವೆಯಾದೆನೋ ಅದೇ ಕರ್ತವ್ಯ. ಆದರೇನು ಮಾಡಲಿ? ಅವಳನ್ನು ಪ್ರೀತಿಸಲಾರೆ. ಅವಳ ನೆನಪು ಬಂದಾಗಲೆಲ್ಲ ತಣ್ಣನೆಯ ಬೆವರು ಬಸಿಯುತ್ತದೆ. ಪ್ರೀತಿಸಬೇಕು....ಪ್ರೀತಿಸಬೇಕು....ಹೌದು.... ಅರಿವುಂಟು....ಆದರೆ ಪ್ರೀತಿಸಲಾರೆ....

ಪ್ರೀತಿ....! ೨೪....! ಅಯ್ಯೋ ದೇವರೆ!

* * * *

೫—೨—೩೦

ನೆನ್ನೆ ರಾತ್ರೆ ಒಂದು ಕನಸು. ನನ್ನ ಬದುಕಿಗೂ ಅದಕ್ಕೂ ಏನಾ ದರೂ ಸಂಬಂಧವುಂಟೆ? ಏನೋ!

ಯಮುನಾತೀರಕ್ಕೆ ಹೋಗಿದ್ದೆ. ಅಲ್ಲಿ ಹದಿನಾರು ಸಾವಿರ ಗೋಪಿಯ ರೊಡನೆ ಕೃಷ್ಣ ರಾಸವಾಡುತ್ತಿದ್ದ....ಗೋಪಿಯರ ರೂಪು ಕಂಡು, ಉನ್ಮತ್ತನಾಗಿ, ಅವರೆಡೆಗೋಡಿ, ನಡುವಿನ ಕೃಷ್ಣನನ್ನು ಸೆಳೆದು ಯಮು ನೆಗೆಸೆದೆ. ಅವನು ಮುಳುಗಿದ ಸ್ಥಳದಲ್ಲಿ ದೊಡ್ಡದೊಂದು ಗುಳ್ಳೆ ಎದ್ದು ಸಿಡಿಯಿತು. ಗೋಪಿಯರೆಲ್ಲ ನನ್ನ ಸುತ್ತ ಒಲಿದು ಬಂದರು. ಅಷ್ಟರಲ್ಲಿ ಕಮಲಗಳ ನಡುವೆ ನೆಗೆದ ಬರಲ ಕಡ್ಡಿಯಂತೆ ಆ ಗೋಪಿಯರ ನಡುವೆ ಸರಸ್ವತಿ ಬಂದು ನನ್ನನ್ನು ಬೇಡಿದಳು. ನನಗೆ ರೇಗಿತು. ಕೃಷ್ಣನನ್ನು

ಒಗೆದಂತೆಯೇ ಅವಳನ್ನೂ ಹೊಳೆಗೊಗೆದೆ. ಮುಳುಗಿದವಳು ಮೇಲೇಳ ಲಿಲ್ಲ. ಮರಳಿ ಬಂದು ಗೋಪಿಯರೊಡನೆ ನಲಿದೆ.

ಬೆಳಗಿನವರೆಗು ಇದೇ ಕನಸು. ಇದರರ್ಥವೇನೊ? ಸರಸ್ವತಿ ಸಾಯುವಳೆ? ಛೆ! ನಾನು ಅಂತಹದನ್ನು ಯೋಚಿಸಬಹುದೆ! ನನ್ನ ಹೆಂಡತಿ! ಏನೇ ಆದರೂ ನನ್ನ ಹೆಂಡತಿ! ಆದರಯ್ಯೋ! ಪ್ರೀತಿಸಲಾರೆ ....ಸಾಧ್ಯವಿಲ್ಲ... ಏನು ಹೆಂಡತಿಯೊ! ದೇವರೆ! ನನಗಿದರಿಂದ ಪಾರು ಎಂದಿಗೋ!

* * * *

೬—೨—೩೦

ಈ ದಿನ ಯಶೋಧರ ಚರಿತ್ರೆ ಓದಿದೆ. "ಪೊಲ್ಲಮೆಯೆ ಲೇಸು! ನಲ್ಲರ ಮೆಯ್ಯೊಳ್." ಪೊಲ್ಲಮೆಯಿದ್ದರೂ ನಲ್ಮೆ ಹುಟ್ಟುವುದೊ? ಅಥವಾ ನಲ್ಮೆಯಿದ್ದಲ್ಲಿ ಪೊಲ್ಲಮೆ ಕಾಣಿಸುವುದಿಲ್ಲವೊ? ಯೋಚಿಸಲಾರೆ....ಮೆದುಳು ಕುದಿಯುತ್ತದೆ. ಯೋಚಿಸಿದರೆ ತಾನೆ ಏನು? ಸಾವು ಬರುವ ತನಕ ನಮ್ಮಿಬ್ಬರಿಗು ಬಿಗಿದ ಗಂಟು ಈ ಯೋಚನೆಗಳಿಗೆ ಬಿಚ್ಚುವುದೆ! ಅಯ್ಯೋ ಅಮ್ಮನ ತೃಪ್ತಿಗಾಗಿ....ಬಂತಲ್ಲ ಇಳ....!

ಅದೇ ಯಶೋಧರಚರಿತ್ರೆಯಲ್ಲಿ ಕಂಡೆ. "ತೀರದುದಕ್ಕೆ ಅಲವರ ಲಾಗದು." ಸಂಕಲ್ಪ ಒಳ್ಳೆಯದು. ಮದುವೆಯಾದ ನನಗೆ, ಇರುವ ಹೆಂಡತಿಯನ್ನು ಬಿಡುವ ಯೋಚನೆಯೇಕೆ? ಬೇರೆ ಹೆಂಗಸರ ಬಯಕೆ ಯೇಕೆ?...."ತೀರದುದಕ್ಕೆ ಅಲವರಲಾಗದು."

ಹೇಳುವುದು ಸುಖ. ಬೇರೆ ಹೆಂಗಸರನ್ನು ಕಂಡ ಕ್ಷಣ ಹಿಂದಿನ ಸಂಕಲ್ಪಗಳೆಲ್ಲ ಮಾಯವಾಗುತ್ತವೆ. ನಾನು ಹಿಂದಿನ ಗುಂಡನಲ್ಲ. ನನ ಗೇನು ಬಂದಿದೆಯೋ ಕೇಡುಗಾಲ!

* * * *

೧೫—೨—೩೦

ಈ ಹತ್ತು ದಿನಗಳಲ್ಲಿ ಮಹಾತ್ಮಾಜೀಯವರ ಆತ್ಮಕಥೆಯನ್ನು ಎರಡು ಬಾರಿ ಓದಿದೆ. ಮನಸ್ಸಿಗೆ ಶಾಂತಿ ಮರಳಿತು. ಮತ್ತೆಯೂ ಓದ ಬೇಕು. ಏನೇ ಆಗಲಿ....ಸರಸಿ ನನ್ನ ಹೆಂಡತಿ. ನನ್ನನ್ನವಳು ಪ್ರೀತಿಸು

ತ್ತಾಳೆ. ನಾನು ಅವಳನ್ನು ಪ್ರೀತಿಸಲೇಬೇಕು. ಅವಳ ಕುರೂಪದಲ್ಲಿಯೇ ಸುರೂಪ ಕಾಣುತ್ತೇನೆ. ಪ್ರೀತಿಸಿಯೇ ಪ್ರೀತಿಸುತ್ತೇನೆ. ಈಗ ಅವಳನ್ನು ನೆನೆದರೆ ಮೈಯಲ್ಲೊಂದು ತರಹ ಹಿತಕರವಾದ ಜುಮ್ಮೆಂಟಾಗುತ್ತದೆ. ಅವಳ ಹೆಸರಿನಲ್ಲಿ ಏನೋ ಮಂತ್ರವಿರುವಂತಿದೆ. ಸ... ರ... ಸಿ! ಏನು ಮೋಹನದ ಹೆಸರು!

ನನಗೀ ವಿವೇಕೋದಯಕ್ಕೆ ಕಾರಣನಾದ ಮಹಾತ್ಮನಿಗೆ ಎಷ್ಟು ಎರಗಿದರೂ ತೀರದು. ಸರಸಿಗೆ ಒಂದು ಪ್ರೇಮಪತ್ರ ಬರೆದೆ ಚೆನ್ನಿಗೆ ಎಷ್ಟು ಸಂತೋಷವಾಗಿರುತ್ತದೊ! ಸದ್ಯಃ ನನ್ನ ಸಂಕಟ ದೂರಾಯಿತು. ದೇವರು ಮಹಿಮಾಸಮುದ್ರ! ಈ ಹತ್ತು ದಿನಗಳಲ್ಲಿ ಪರಸ್ತ್ರೀಯ ಚಿಂತೆ ಬಂದಿಲ್ಲ. ಪರಸ್ತ್ರೀ! ಏಕೆ? ನನ್ನ ಹೆಂಡತಿ····ಥು! ಸರಸಿ ಚೆಲುವೆ. ಹಾ! ಶಿಳ....!

ಹಾಳು ಕನಸುಗಳೂ ಇಲ್ಲ.

* * * *

೧೬—೨—೩೦

ಇಂದು ಗುರುಗಳ ಮನೆಯಲ್ಲಿ ರಾಮಪಟ್ಟಾಭಿಷೇಕ. ಕರೆದಿದ್ದರು. ಹೋಗಿದ್ದೆ. ಕಳೆಯಿತೆಂದಿದ್ದ ಪೀಡೆ ಬಿಟ್ಟಿಲ್ಲವಿನ್ನೂ. ರಾಮೋತ್ಸವ ಸಂಭ್ರಮದಲ್ಲಿ ಓಡಾಡುತ್ತಿದ್ದ ನಿರಿಸೀರೆಯಾಕೆಯ ಮೇಲೆ ಹಗಲೆಲ್ಲ ನನ್ನ ಕಣ್ಣಿತ್ತು. ನೋಡದಿರಲಾಗಲಿಲ್ಲ. ಅವಳನ್ನು ನೋಡುತ್ತಿದ್ದಷ್ಟು ಹೊತ್ತೂ, ಸರಸ್ವತಿಗಿಂತ ಅವಳನ್ನು ಮದುವೆಯಾಗಿದ್ದರೆ....ಎಂದೆನಿಸುತ್ತಿತ್ತು. ನನಗೆ ಇನ್ನು ಮೇಲೆ ಮೇಲಿಲ್ಲ. ಅವಳು....ಅಲ್ಲ....ಅವರು ನನ್ನ ಗುರುಗಳಾಕೆ! ದೇವರೆ! ನಿನ್ನ ಸೇವೆಗೆ ಬಂದರೂ ನನಗೆ ಈ ಕೋಟಲೆಯಿಂದ ಮುಕ್ತಿಯಿಲ್ಲವೆ! ಗುರುಪತ್ನಿ ಗಾಶಿಸಿದ ಚಂದ್ರನೇನಾದ!

ಇದು ಹೀಗೆಯೇ ಇದ್ದರೆ, ಖಂಡಿತ ನನಗೆ ಹುಚ್ಚು ಹಿಡಿಯುತ್ತೆ. ಇಲ್ಲ, ಸಹಿಸಲಶಕ್ಯವಾದರೆ ಉರುಲು ಹಾಕಿಕೊಳ್ಳುತ್ತೇನೆ. ದೇವರು ಮನುಷ್ಯನನ್ನು ಇಷ್ಟು ಪರೀಕ್ಷೆ ಮಾಡಬಾರದು. ಅಯ್ಯೋ! ನೆನ್ನೆಯ ಸಂಕಲ್ಪಗಳೇ!

* * * *

೧೭—೨—೩೦

ನೆನ್ನೆ ರಾತ್ರೆ ಮತ್ತೆ ಹಿಂದಿನಂತೆಯೆ ಕನಸು. ಆದರೆ ಕೃಷ್ಣನಿರಲಿಲ್ಲ. ಸರಸ್ವತಿಯೂ ಬರಲಿಲ್ಲ. ಗೋಪಿಯರೊಡನೆ ಕುಣಿಯುತ್ತಿದ್ದಾಗ ರಾಧೆ ಹತ್ತಿರ ಬಂದು, ಮುತ್ತು ಕೋರಿದಳು. ಅವಳನ್ನು ಅಪ್ಪಿದೆ. ರಾಧೆಯೆಂದು ನಾನು ಅಪ್ಪಿದುದು ಒಂದು ಪಾಪಾಸುಕಳ್ಳಿ ಪೊದೆ! ಅಯ್ಯೋ! ಈ ಕನಸು ಗಳಿಗೆ ಕೊನೆ ಎಂದೋ!

ಮಧ್ಯಾಹ್ನ ಕನ್ನಂಬಾಡಿಗೆ ಹೋಗಿದ್ದೆ. ಇರ್ವಿನ್ ಕಾಲುವೆಯಲ್ಲಿ ನೀರು ಬಿಟ್ಟಿದ್ದರು. ಪ್ರವಾಹದಂತಿತ್ತು. ಪ್ರಾಯದ ಹುಡುಗಿಯೊಬ್ಬಳು ನಿಂತಿದ್ದಳು. ಒಳ್ಳೆಯ ತುಂಬು ದೇಹ. ಜುಮ್ಮೆಬ್ಬಿಸುವ ಮೈಕಟ್ಟು. ಸರಸ್ವತಿಯ ನೆನಪಾಗಿ, 'ಸರಸ್ವತಿಯ ಬದಲು ಈ ಹುಡುಗಿ ನನ್ನವಳಾಗಿದ್ದಿದ್ದರೆ!' ಎಂದುಕೊಂಡೆ.

ಆ ಹುಡುಗಿಯನ್ನು ಕಂಡು, ನನಗೆ ಮದುವೆಯಾಗಿದೆಯೆಂಬ ನೆನಪು ಅಳಿಯಿತು. 'ಈ ಹುಡುಗಿ ಈ ಪ್ರವಾಹದಲ್ಲಿ ಬಿದ್ದರೆ, ನೋಡುತ್ತ ಬಿದ್ದರೆ, ನಾನೂ ಬಿದ್ದು ಇವಳನ್ನು ಮೇಲಕ್ಕೆತ್ತುತ್ತೇನೆ. ನಾವಿಬ್ಬರೂ ಒಂದೇ ಜಾತಿ. ನಮ್ಮಿಬ್ಬರಿಗೂ ಮದುವೆಯಾಗುತ್ತದೆ. ಆಮೇಲೆ ೨೪ ನೆಯ ತಾರೀಖು....!' ಎಂದು ಯೋಚನೆ ಬಂತು.

ಅಷ್ಟರಲ್ಲೇ ಹಗಲುಕನಸು ಚೆದರಿತು. ನಾಚಿಕೆಯಾಯಿತು. ಹಿಂದಿರುಗಿದೆ.

ನಾನು, ಮದುವೆಯಾದವನು. ಪರಸ್ತ್ರೀಯರನ್ನು ಬಯಸುವುದೆಂದರೇನು! ನನ್ನ ಪ್ರೀತಿ ನನ್ನ ಹೆಂಡತಿಗೆ ಮೊದಲು ಸಲ್ಲತಕ್ಕದ್ದು. ಸರಸ್ವತಿಯನ್ನು ನಾನು ಪ್ರೀತಿಸಬೇಕು. ಪ್ರಾಣ ಹೋದರೂ ಸರಿಯೆ—ಇಲ್ಲದ ಪ್ರೀತಿಯನ್ನು ಆಗಿಸಬೇಕು. ಕಂಡ ಕಂಡ ಹೆಂಗಸರನ್ನೆಲ್ಲಾ ಬಯಸಲು ನನಗೇನಾದರೂ ಮೆದುಳು ಕೆಟ್ಟಿದೆಯೆ? ಇಲ್ಲ, ಇಲ್ಲ, ೨೪ನೆಯ ತಾರೀಖು ಇಂದೇ ಬಂದರೆ, ಯಾವುದಕ್ಕೆ ಹೆದರುವೆನೋ ಅದು ಬೇಗ ತೊಲಗಿದರೆ....ದೇವರೆ! ದಿನದಂತೆ ಈ ಹೊತ್ತೂ ಬೇಡುವೆನು ನನ್ನ ಹೆಂಡತಿಯಲ್ಲಿ ನನಗೆ ಪ್ರೀತಿಯುಂಟಾಗುವಂತೆ ಕರುಣಿಸು.

* * * *

೧೮—೨--೩೦

ಕಿಟ್ಟೂ ಹೆಂಡತಿ ರುಕ್ಕು ಜಾಣೆ, ಚೆಲುವೆ. ಸರಸ್ವತಿ ಹಳ್ಳಿಗೊಡ್ಡು, ಕುರೂಪಿ. ಏನಾದರೂ ರೋಗ ಬಂದು ಕಿಟ್ಟು ಸರಸ್ವತಿ ಇಬ್ಬರೂ ಸತ್ತರೆ, ರುಕ್ಕುಗೆ ಗಂಡನಿರುವುದಿಲ್ಲ, ನನಗೆ ಹೆಂಡತಿ ಇರುವುದಿಲ್ಲ. ನಾವಿಬ್ಬರೂ ಮದುವೆಯಾದರೆ....೨೪ನೆಯ ತಾರೀಖು....ಆದರೆ ರುಕ್ಕು ಅವಳ ತಂದೆ ತಾಯಿಗಳು ವಿಧವಾವಿವಾಹಕ್ಕೊಪ್ಪಬೇಕು. ಒಪ್ಪಿದರೆ ...

ಅಯ್ಯೋ! ಏನಿದು ಅನ್ಯಾಯ, ನಾನು ಚಿಂತಿಸುವುದು! ಮಿತ್ರ ದ್ರೋಹ! ಅವನು ಸಾಯುವುದಲ್ಲದೆ ಅವನ ಹೆಂಡತಿ....ಅಯ್ಯೋ ನನ ಗಿನ್ನು ಉದ್ಧಾರವಿಲ್ಲ. ಸರಸ್ವತಿ ಸಾಯಬೇಕೆಂದೆನೇ! ಕೊಲೆಪಾತಕ ನಾದೆನೇ! ಇಲ್ಲ. ಖಂಡಿತ ನನಗೆ ಹುಚ್ಚು ಹಿಡಿಯುತ್ತೆ. ಅಮ್ಮನಿಗೆ ತೃಪ್ತಿ....೨೪ನೆಯ ತಾರೀಖು....ಏನು ತೃಪ್ತಿಯೋ....!

* * * *

೧೯—೨—೩೦

ನೆನ್ನೆ ರಾತ್ರೆ ಮತ್ತೆ ಹಾಳು ಕನಸು. ಹದಿನಾರು ಸಾವಿರ ಗೋಪಿಯ ರೊಡನೆ ಯಮುನಾತೀರವಿಹಾರಿಯಾಗಿದ್ದೆ. ರಾಧೆ ಬಂದು, ಒಂದು ಕೊಳಲನ್ನು ನನ್ನ ಕೈಯಲ್ಲಿಟ್ಟು ಬಾರಿಸಹೇಳಿದಳು. ತುಟಿಗೊತ್ತಿದೆ. ಊದಲು ಸಿಡಿಲಿನ ಸ್ವರಗಳು ಉರುಳಿದುವು. ಕೈಯ ಕೊಳಲು ಹಾವಾಯ್ತು. ನಾನು ಮೋಟುಮರವಾದೆ. ಹದಿನಾರು ಸಾವಿರ ಗೋಪಿ ಯರು ಹದಿನಾರು ಸಾವಿರ ಮುಳ್ಳುಪೊದೆಗಳಾಗಿ ನನ್ನ ಸುತ್ತ ಮನಸ್ಸೀ ಕುಣಿಯತೊಡಗಿದರು. ಯಮುನೆ ಬತ್ತಿ ಅದರಡಿಯ ಮರಳಿನ ಮೇಲಿದ್ದ ಕೃಷ್ಣನ ಶವ ಕಿಲಕಿಲ ನಕ್ಕಿತು. ಆಕಾಶವೂ ಚಂದ್ರನೂ ಕೆಂಪಗಾದುವು. ಯಮುನೆಯ ಬಯಲು ರಕ್ತದಲ್ಲಿ ನೆನೆದಂತಿತ್ತು. ಕಿಟ್ಟನೆ ಕಿರಿಚಿದೆ. ಎಚ್ಚರಾಯ್ತು. ರೂಮಿನ ದೀಪವಾರಿ ಕತ್ತಲಾವರಿಸಿತ್ತು.

ಇಲ್ಲ....ಇನ್ನೂ ಹುಚ್ಚು ಹಿಡಿದಿಲ್ಲ....

ಇಂದು ಮಧ್ಯಾಹ್ನ! ಅಬ್ಬ! ನನ್ನ ಕತೆ ಮುಗಿಯಿತು. ನನಗೆ ಇನ್ನು ಏಳಿಗೆಯಿಲ್ಲ. ಮಧ್ಯಾಹ್ನ ನನ್ನ ಕೊಠಡಿಗೆ ನನ್ನ ತಂಗಿ ಬಂದು, 'ಅಣ್ಣಯ್ಯ' ಎಂದಳು. ರಾತ್ರಿ, ದೂರದ ದಿಗಂತದಲ್ಲಿ, ಮಲಗಿದ ಕತ್ತ

ಲೆಯ ಮುಸುಕೆತ್ತಿ ಇಣಕುತ್ತಿರುವ ಚಂದ್ರಬಿಂಬದಂತೆ ಅವಳ ಕಪ್ಪನೆಯ ಕೇಶರಾಶಿಯ ಮಧ್ಯದಲ್ಲಿತ್ತು ಅವಳ ನಗುಮೊಗ. ಅವಳ ಕೆನ್ನೆಗಳು ಹಾಲಿನಲ್ಲಿ ತೇಲಿಬಿಟ್ಟ ಕಮಲದಂತಿದ್ದುವು. ಸರಸ್ವತಿ....೨೪ನೆಯ.... 'ಬಾಮ್ಮ!' ಎಂದೆ. ಹತ್ತಿರ ಬಂದಳು. ತಂಗಿಯೆಂಬುದನ್ನೂ ಮರೆತು ಅವಳನ್ನು ತಬ್ಬಿಕೊಂಡು, ಕೆನ್ನೆ....ಕೆನ್ನೆಯ ಚರ್ಮ ನನ್ನ ಬಾಯಲ್ಲಿ ನಿಂತು....ಅಯ್ಯೋ!....

ಇಲ್ಲ, ನನಗೆ ಹುಚ್ಚು ಹಿಡಿದಿಲ್ಲ. ಇದೆಲ್ಲ ನಡೆದುದು ನನಗೆ ಚೆನ್ನಾಗಿ ನೆನಪಿದೆ. ಎಲ್ಲ ಸರಿಯಾಗಿ ಬರೆಯುತ್ತಿದ್ದೇನೆ. ಇದೆಲ್ಲ ಬರೆಯುವುದೇಕೆ?....ನನಗೆ ಹುಚ್ಚು ಹಿಡಿದಿದೆ....೨೪ನೆಯ....ಸ್ವಂತ ತಂಗಿಯಲ್ಲಿ ಅತ್ಯಾಚಾರ! ಅಯ್ಯೋ ನನ್ನ ಬಾಳೇ!....

ಇಲ್ಲ, ಹುಚ್ಚಲ್ಲ. ಉರುಲೇ ಇದಕ್ಕೆ ತಕ್ಕ ಮಾರ್ಗ. ಬಾಳು ಬೇಸರವಾಗಿದೆ. ದೇವರು ನಮ್ಮ ನೆರವಿಗೆ ಬರದಿದ್ದರೆ, ನಮ್ಮ ಪಾಡು ನಾವೇ ನೋಡಿಕೊಳ್ಳಬೇಕು........ಆದರೆ ಕೈಹಿಡಿದ ಸರಸ್ವತಿ........? ೨೪ನೆಯ ತಾರೀಖು....

* * * *

೨೦—೨—೩೦

ಇವತ್ತು ಡಾಕ್ಟರ್ ಬಂದಿದ್ದ....ಹುಚ್ಚಂತೆ ...! ನನಗೆ....! ಅವನಿಗೇ ಹುಚ್ಚು ....ಹುಚ್ಚು ಅವರಪ್ಪನಿಗೆ .... ನನ್ನ ತಂಗಿಯ ಕೆನ್ನೆ ಗಾಯ ಮಾಡಿದೆನಂತೆ....ಹಲಾಲಕೋರ....! ಸುಳ್ಳು ಹೇಳುತ್ತಾನೆ....! ಅವರ ತಾತನಿಗೆ ಹುಚ್ಚು ಹಿಡಿಸುತ್ತೇನೆ....!

೨೯ ಖ ೮೦೦೮ ೬೯೦.೧....

ನಿಮ್ಮತ್ತಾತ ಹುಚ್ಚ........ಹುಚ್ಚಂತೆ........ತಾಯಿಗ್ಗಂಡ......... ನಿನಗೆ ಹು....

* * * *

(ತಾರೀಕಿಲ್ಲ. ಬರವಣಿಗೆ ಮಾತ್ರ ಹಿಂದಿನದೇ)

ಈ ಕೋಣೆ ... ಕಬ್ಬಿಣ .... ದೊರೆ....ಬಂಗಾರದ ಸಲಾಕಿ....ಏ.... ನಾನೂ ನೀನೂ ಜೋಡಿ ... ಕೊಳಿಯು ...ಬೊಮ್ಮರಸ....

೮೯೬೪-೯೯೦-೭೭೦೦೪

ಖಮಭಂ ರಾಯೂಞಜ

ಬಾಗಿಲಿನಲ್ಲಿ ಗುಮ್ಮ ಖಾಕಿಬಟ್ಟೆ ಹಾಕಿಕೊಂಡು ನಿಂತಿದೆ....

| ೪x೩ | ೬೦ | ೧೭x೫ |
|---|---|---|
| ——— | ೭ | ——— |
| ೮೯೯ | ——— | ೦೮೨ |

೦೯೦೦೦ ಉತ್ತರ

ಅಮಪಞ axpm ಭಂಭಂಭೈ !

ನಮ್ಮ ತಾಯಿಗೆ ಅಜ್ಜಿಗೆ ಮೂರು ಕೊಂಬು !

ಬಾರೇ ಹುಡುಗಿ ನನ್ನ ಹಿಂದೆ !

ಹುಚ್ಚ ಲೇ....!

ಅಯ್ಯೋ ! ಸರಸ್ವತಿ ! ಇಲ್ಲಿಗೂ ಬಂತೇ !

* * * *

(ಅವರ ಮಗ್ಗಲು ಹಾಳೆಯಲ್ಲಿ.)

Poor chap!...rather...Lucky Dog! Committed suicide this morning.

24—2—30

Lyf d 'Sgustos,
Supt.
Mental Hospital.

# ಮೂಲವೆಲ್ಲಕ್ಕು ಮನಸು

---

ರಾಜಗೃಹದ ಬಳಿಯ ಗೃಧ್ರಕೂಟ ಪರ್ವತ. ಪರಮಾತ್ಮನಾದ ಬುದ್ಧದೇವನ ಪವಿತ್ರ ಪಾದಧೂಳಿಯಿಂದ ಪುನೀತವಾದ ಗಿರಿವರದ ನೆತ್ತಿ. ನೆತ್ತಿಯ ನೆಲೆಯಲ್ಲಿ ಎರಡು ಗುಹೆಗಳು. ಅಲ್ಲಿ ಇಬ್ಬರು ಬೌದ್ಧ ಸನ್ಯಾಸಿಗಳು ಧ್ಯಾನಶೀಲಾನುಷ್ಠಾನಾದಿಗಳಿಂದ ನಿರ್ವಾಣವನ್ನು ಸಾಧಿಸುತ್ತಿದ್ದರು. ಇಬ್ಬರೂ ಅಕ್ಕಪಕ್ಕದ ಗುಹೆಗಳಲ್ಲಿದ್ದರೂ ಒಬ್ಬರೊಡನೆ ಒಬ್ಬರು ಮಾತನಾಡಲು ಕೂಡ ಅವರಿಗೆ ಅವಕಾಶವಾಗುತ್ತಿರಲಿಲ್ಲ. ಅವರ ಸಾಧನೆಯ ಸಂಯಮ ಅಷ್ಟಿತ್ತು ! ಆ ಅರ್ಹತರ ಪ್ರಭಾವಕ್ಕೆ ಸೋತು ರಾಜಗೃಹದ ಆಸ್ತಿಕರೆಲ್ಲರೂ ತಮ್ಮ ತಮ್ಮ ಸರ್ವಸ್ವವನ್ನೂ ತಂದು ತಂದು ಅವರ ಅಡಿಗಳಲ್ಲಿ ವಿನಿಯೋಗಿಸುತ್ತಿದ್ದರು.

ಹೀಗಿರಲು, ಆ ಅರ್ಹತರು ನಿರ್ವಾಣಪದದ ಕಡೆಗೆ ಏರಿದ ಒಂದೊಂದು ಮೆಟ್ಟಲೂ, ತಾನು ಅಧೋಗತಿಗೆ ಇಳಿದ ಒಂದೊಂದು ಮೆಟ್ಟಲೆಂದು ಮಾರಪಿಶುನನು ಎಣಿಸಿದನು. ರಾಗಗಳ ಅಧಿದೇವತೆಯಾದ ಮಾರನಿಗೆ ಸಂತರ ಅಭ್ಯುದಯವು ಎಂದೂ ಸಂತೋಷಕಾರಕವಲ್ಲ. ಅದುಸಲುವಾಗಿ ರಾತ್ರಿ ಹಗಲೆನ್ನದೆ ಅನಿಮೇಷನಾಗಿ ಹೊಂಚುತ್ತಿದ್ದು, ಮಾರನು, ಒಂದು ದಿನ ಆ ಇಬ್ಬರು ಅರ್ಹತರನ್ನೂ ಒಟ್ಟಿಗೆ ಬುಟ್ಟಿಗೆ ಹಾಕಿಕೊಂಡನು.

ಧರ್ಮಪಥದಿಂದ ಓರೆಯಾದ ಆ ಅರ್ಹತರು, ಒಬ್ಬನ ನಡತೆಯನ್ನು ಒಬ್ಬನು ಇನ್ನೊಬ್ಬನಿಗೆ ತಿಳಿಸದೆ, ಅವಸರವಸರವಾಗಿ ರಾಜಗೃಹಕ್ಕೆ ಓಡಿ ಓಡಿದರು. ಓಡುವಾಗ, ಆಸ್ತಿಕವೃಂದವು ತಮತಮಗಿತ್ತ ಧನಕನಕಗಳು ಆದಷ್ಟನ್ನು ಕಟ್ಟಿಕೊಂಡು ಓಡಿದರು. ಓಡಿಬಂದು, ರಾಜಗೃಹದಲ್ಲಿ ಮೂರು ದಿನ ನಿಂತರು. ಆ ಮೂರು ದಿವಸಗಳಲ್ಲಿ ಅಭಕ್ಷ್ಯಭೋಜನ, ಅಪೇಯಪಾನ, ಅಗಮ್ಯಾಗಮನಗಳಲ್ಲಿ ರಮಿಸಿ, ದಶಶೀಲಗಳಿಗೆ ತಿಲಾಂಜಲಿಯಿತ್ತು, ನಾಲ್ಕನೇ ದಿವಸ ಗೃಧ್ರಕೂಟಕ್ಕೆ ಹಿಂದಿರುಗಿದರು.

ಆ ಇಬ್ಬರು ಅರ್ಹತರಲ್ಲಿ ಒಬ್ಬನ ಹೆಸರು ದೇವಪುತ್ರ. ಇನ್ನೊಬ್ಬನ ಹೆಸರು ಜಿನಪುತ್ರ. ದೇವಪುತ್ರನು ದಾರಿಯುದ್ದಕ್ಕೂ ಅಳುತ್ತ ಹುಯ್ಯಲಿಡುತ್ತ ಬರುತ್ತಿದ್ದ. ಜಿನಪುತ್ರ ಅವನ ಪಕ್ಕದಲ್ಲಿ ನಗುಮುಖನಾಗಿ ಬರುತ್ತಿದ್ದ.

"ಪಾಪಿ ನಾನು. ಪಾತಾಳಕ್ಕಿಳಿದವನು ನಾನು. ನಾನು ಮಾಡಿರುವ ಪಾಪಕಾರ್ಯಗಳ ಫಲ ಮುಗಿಯಲು ಎಷ್ಟು ಶತಕೋಟಿ ಜನ್ಮವಾದರೂ ಸಾಲದಯ್ಯೋ! ನನ್ನ ಶೀಲಾನುಷ್ಠಾನ ಜಪತಪ ಧ್ಯಾನಗಳೆಲ್ಲವೂ ಮಣ್ಣುಗೂಡಿದುವಲ್ಲಾ! ಪಾಪದ ಹಾದಿಯನ್ನು ಇಂದು ತುಳಿಯುವ ಈ ಮಹಾಪುಣ್ಯಕ್ಕೆ ಇದುವರೆಗೆ ನಿರ್ವಾಣಸಾಧನೆಗೆ ನಾನೇಕೆ ಅವಿರತವಾಗಿ ಶ್ರಮಿಸಬೇಕಿತ್ತು? ಅಯ್ಯೋ! ಕೆಟ್ಟೆ!" ಎಂದು ದೇವಪುತ್ರ ಅಳುತ್ತಿದ್ದ.

ಜಿನಪುತ್ರ ಅಕ್ಷತಮನಸ್ಕನಾಗಿ ಧರ್ಮಪದವನ್ನು ಕೀರ್ತಿಸುತ್ತಿದ್ದ.

"ಅಯ್ಯೋ! ಪಾಪ ಮಾಡಿದುದರ ಫಲವಾಗಿ ನಿನಗೆ ಹುಚ್ಚು ಹಿಡಿಯಿತೇ?!" ಎಂದು ದೇವಪುತ್ರ ನಗುತ್ತಿದ್ದ. ಜಿನಪುತ್ರನತ್ತ ತಿರುಗಿದ.

"ಏಕೆ ಭಿಕ್ಷು?" ಎಂದು ಜಿನಪುತ್ರ ಕೇಳಿದ.

"ಪಾಪಿ! ಮಾಡಿದುದಕ್ಕೆ ಪರಿತಾಪವಾಗದೇ ನಿನಗೆ?"

"ಪರಿತಾಪಪಡುವಂತಹುದು ನಾನೇನು ಮಾಡಿರುವೆ, ಭಿಕ್ಷು?"

"ರಾಜಗೃಹ! ರಾಜಗೃಹ! ಮರೆತೆಯಾ ರಾಜಗೃಹವನ್ನ?"

"ರಾಜಗೃಹ! ಅಹುದು! ಭಗವಾನ್ ಬುದ್ಧದೇವನ ಅಸದೃಶವಾದ ಧರ್ಮಕ್ಕೆ ಮಾರುಹೋದ ಮಾನವಕೋಟಿಯ ಪುಣ್ಯನಿವಾಸ!"

"ರಾಜಗೃಹದಲ್ಲಿ ನಾವೇನು ಮಾಡಿದೆವು? ಮರೆತೆಯಾ ಮತಿಹೀನ?"

"ನಾವೇನ ಮಾಡಿದೆವು! ಒಯ್ದು ಧನಕನಕಗಳನ್ನು ಬಡವರಿಗೆ ಹಂಚಿದೆವು. ಸುತ್ತುಮುತ್ತಿನ ಚೈತ್ಯಸ್ತೂಪಗಳನ್ನು ಸಂದರ್ಶಿಸಿದೆವು. ರಕ್ತಚಂದನಾರಾಮದಲ್ಲಿ ಆರ್ಯ ಸದಾನಂದನ ಅಮೃತವಾಣಿಯನ್ನು ಕೇಳಿ ತಣಿದೆವು. ಭಗವಾನನ...."

ದೇವಪುತ್ರ ಕಳೆಗುಂದಿ ದಿಗ್ಭ್ರಾಂತನಾಗಿ ಜಿನಪುತ್ರನ ಕಡೆ ದಿಟ್ಟಿಸಿದ.

"ಜಿನಪುತ್ರ! ಗುರುವಾರ ಮಧ್ಯಾಹ್ನ....ಆ ವೇಶ್ಯಾವಾಟದಲ್ಲಿ.... ಮರೆತೆಯಾ?"

"ಭಿಕ್ಷು! ಆ ಗುರುವಾರವನ್ನು ಮರೆಯುವುದೆ! ಉಪಾಸಕ ಕಾಶ್ಯಪನ ಮನೆಯಲ್ಲಿ ನಡೆದ ಆ ಆತಿಥ್ಯವನ್ನು ಮರೆಯುವುದೆ!"

"ದೇವ! ದೇವ! ಮತಿಭ್ರಷ್ಟವಾಯಿತೆ ನಿನಗೆ, ಪಾಪಿ! ಹೋಗಲಿ, ಭೃಗುವಾರ ಯಾರೊಡನೆ ಕುಡಿದು ಕುಣಿದಾಡಿದೆವು.....ಹೇಳುವೆಯಾ?"

"ಭೃಗುವಾರ? ಅಂದು ತಥಾಗತನ ಮಹಾಭಿನಿಷ್ಕ್ರಮಣ ಮಹೋತ್ಸವದ ಸ್ಮಾರಕವಲ್ಲವೆ, ಭಿಕ್ಷು! ಅನುಮಾತರಂಗಿಣಿಯ ಶೀತಲ ಸಲಿಲವನ್ನೀಂಟಿ ಉತ್ಸವದ ಮುಂದುಗಡೆ ಹಾಡಿ ನಡೆದೆವಲ್ಲವೆ!"

"ಪಾಪಿ! ಪಾಪಿ! ನಾವು ಯಾರ ಕಾಲ ಕೆಳಗೆ ಉರುಳಿದ್ದೆವು, ನೆನಪಿದೆಯೋ?"

"ಯಾರ ಕಾಲ ಕೆಳಗೆ? ಆಸೇತು ಹಿಮಾಚಲ ಪರೀತವಾದ ಈ ಭಾರತವರ್ಷದಲ್ಲಿ ಬೌದ್ಧ ಧರ್ಮಕ್ಕೆ ಮೂರ್ಧಾಭರಣದಂತಿರುವ ಆರ್ಯ ಸುಮಂಗಲನ ಪಾದಕಮಲದಲ್ಲಲ್ಲವೆ ನಾವು ಕೆಡೆದಿದ್ದುದು!"

"ನನ್ನನ್ನೇಕೆ ಅಣಕಿಸುವೆ, ಪಾಪಿ? ನೆನ್ನೆ ಮೊನ್ನೆಯ ಪಾಪಕರ್ಮಗಳ ಫಲವಾಗಿ ಮಾರನು ನಿನ್ನನ್ನು ಪೂರ್ಣವಾಗಿ ಮುರಿದನೇ! ನೀನು ಇದ್ದುದು ಪಾಪಿಗಳ ಗೋಷ್ಠಿ! ಪಾಪಿಗಳ ಗೋಷ್ಠಿ!"

ಜಿನಪುತ್ರ ದೇವಪುತ್ರನ ಕಡೆ ನೋಡಿದ.

"ಭಿಕ್ಷು! ಮಾರ ನಿನ್ನನ್ನು ಮುರಿದಿರುವನೊ, ನನ್ನನ್ನು ಮುರಿದಿರುವನೊ, ಹೇಳಲು ಸಾಧ್ಯವಿಲ್ಲ. ಭಗವಂತನನ್ನು ಕೀರ್ತಿಸಿ, ಅವನ ಶಿಷ್ಯರ ಆಸ್ತಿಕ್ಯದಲ್ಲಿ ರಮಿಸಿದವನು ನಾನು. ವಿಹಾರಗಳನ್ನು ವೇಶ್ಯಾವಾಟಗಳೆಂದೂ, ಪವಿತ್ರ ಅನುಮಾ ಸಲಿಲವನ್ನು ಮದ್ಯವೆಂದೂ, ಆರ್ಯರನ್ನು ವೇಶ್ಯೆಯರೆಂದೂ ಕರೆಯುವವನು ನೀನು. ಮಾರನು ಯಾರನ್ನು ಮೆಟ್ಟಿರುವನು, ನೋಡು" ಎಂದ.

ದೇವಪುತ್ರ ತಡೆಯಲಾರದೆ ಹೋದನು. ಬಾಯಿಗೆ ಬಂದ ಬೈಗುಳನ್ನೆಲ್ಲ ಸಿಡಿಸುತ್ತ, ಜಿನಪುತ್ರನ ಮೇಲೆ ಬಿದ್ದು ಅವನನ್ನು ಕೊಲ್ಲ ಹೋದ. ಅದು ಸಾಗದೆ, ಸಾಕಾಗಿ, ಇಬ್ಬರೂ ಮುಂದೆ ನಡೆದರು. ದೇವಪುತ್ರ ರೋದಿಸುತ್ತ ಎದೆ ಎದೆ ಚೆಚ್ಚಿಕೊಳ್ಳುತ್ತ ನಡೆದ. ಜಿನಪುತ್ರನ ಬಾಯಿ ಧರ್ಮಪದಕ್ಕೆ ಬೀಡಾಗಿತ್ತು.

ಮರುದಿನ ಬೆಳಗ್ಗೆ ದೇವಪುತ್ರನು ಎದ್ದ.

"ಅಲ್ಲ! ನನ್ನ ಸಾಧನೆಗಳಿಂದ ಋದ್ಧಿ ಸಾಕ್ಷಾತ್ಕ್ರಿಯೆಯೇ ಮುಂತಾದ ಅತಿಮಾನುಷ ಸಾಮರ್ಥ್ಯಗಳನ್ನು ಪಡೆದಿದ್ದೆ. ಈ ಕ್ಷಣಿಕವಾದ ಭೋಗಕ್ಕೆ ಸೋತು ದಶಶೀಲಗಳನ್ನೂ ಮುರಿದೆ. ಇನ್ನು ನನಗೆ ಉದ್ಧಾರವೆಲ್ಲಿ? ಇಳಿದುದು ಇಳಿದಾಯ್ತು; ಇನ್ನು ಇಳಿತಕ್ಕೆ ತಡೆಯೆಲ್ಲಿ!" ಎಂದು ಚಿಂತಿಸಿ, ನೆಟ್ಟನೆ ರಾಜಗೃಹಕ್ಕೆ ಬಂದ. ಬಂದು, ಬಾಳಬಾರದ ಬದುಕನ್ನು ಬದುಕಿ, ಕಡೆಗೊಂದು ದಿವಸ, ಕೈಲಿ ಕಾಸಿಲ್ಲದೆ, ಜತೆಯ ಕೆಡುಕರನ್ನು ಕೂಡಿ, ದಾರಿಗರನ್ನು ಲೂಟಿಮಾಡಿ, ಕೊಂದ; ನಗರಾಧಿಕಾರಿಗಳ ಕೈಗೆ ಸಿಕ್ಕಿದ; ಶೂಲವನ್ನೇರಿ ಸತ್ತ; ಅಧೋಗತಿಗಿಳಿದ.

ಇತ್ತ ಜಿನಪುತ್ರ ಎಂದಿನಂತೆ ತನ್ನ ಸತ್ಕರ್ಮಗಳನ್ನು ನಡೆಸಿ, ಎಂದೂ ಯಾರೂ ಅರಿಯದ ಅದ್ಭುತಶಕ್ತಿಗಳನ್ನು ಪಡೆದ; ಅನೇಕ ಪವಾಡಗಳನ್ನು ಮೆರೆದ. ಕಡೆಗೆ, ನಿರ್ವಾಣ ಪಡೆದಾಗ, ಒಣಗಿ ಓಟುಗರಿಯಾಗಿದ್ದ ಅವನ ಶುಷ್ಕದೇಹವು ಹದಿನಾರರ ಪ್ರಾಯದವರ ಹಾಗೆ ಸರ್ವ ಲಕ್ಷಣ ಸಮನ್ವಿತವಾಗಿ ಸುಕುಮಾರವಾಯಿತು. ಸ್ವರ್ಗೀಯವಾದ ಸುವಾಸನೆಯೊಂದು ಸುತ್ತಲೂ ಹಬ್ಬಿತು. ಅವನ ಅವಶೇಷಗಳ ಮೇಲೆ ಎತ್ತಿದ ಸ್ತೂಪವನ್ನು ಸಂದರ್ಶಿಸಲು ಭಕ್ತರು ಮೂಲೆಮೂಲೆಗಳಿಂದಲೂ ಬಂದು, ಬಹುಮಾನಿಸುತ್ತಿದ್ದರು.

* * *

ಕುಕ್ಕುಟಪಾದಗಿರಿಯಲ್ಲಿ ಆರ್ಯ ಮಹಾತಿಷ್ಯನು ತನ್ನ ಮುಂದಿನ ಗೋಷ್ಠಿಗೆ ಈ ಕತೆಯನ್ನು ನುಡಿದು, ಕಡೆಗೆ, "ಭಿಕ್ಷುಗಳೆ! ದೇವಪುತ್ರ ಜಿನಪುತ್ರರು ಇಬ್ಬರೂ ಒಂದೇ ಕಾಲದಲ್ಲಿ ಒಂದೇ ಕೆಲಸವನ್ನು ಮಾಡಿದರೂ, ಒಬ್ಬನ ಗತಿಯು ಇನ್ನೊಬ್ಬನ ಗತಿಗೆ ಮೇರುವಿನ ಅಂತರದಲ್ಲಿ ಹೋಗಿ ನಿಂತಿತು. ಇದಕ್ಕೆ ಕಾರಣವನ್ನು ಸಾವಧಾನವಾಗಿ ಮನದಲ್ಲಿ ತಿರುವಿ. ನುಡಿ ನಡೆಗಳು ಮುಖ್ಯವಹುದು. ಆದರೆ ಮನಸ್ಸನ್ನು ಬಿಟ್ಟ ನುಡಿನಡೆಗಳು ನುಡಿನಡೆಗಳೇ ಅಲ್ಲ. ಭಿಕ್ಷುಗಳೇ! ಮೂಲವೆಲ್ಲಕ್ಕು ಮನಸು" ಎಂದನು.

# ಅವಳ ಗಂಡ

---

ನನ್ನ ಪರಿಚಯದವನೊಬ್ಬ ನನಗೆ ಈ ಕತೆ ಹೇಳಿದ:

ನಾನು ಬೆಂಗಳೂರಿನಲ್ಲಿ ವಿದ್ಯಾರ್ಥಿದಶೆಯಲ್ಲಿದ್ದಾಗ, ಅಲ್ಲಿ ಒಂದು ಕಡೆ ರೂಂ ಮಾಡಿಕೊಂಡಿದ್ದೆ. ನಾನು ಇದ್ದ ಕಡೆಯಲ್ಲಿ. ಅಲ್ಲಿದ್ದ ಕೆಲವು ಹೆಂಗಸರು ನಡತೆಯಲ್ಲಿ ಸ್ವಲ್ಪ ಹಾಗೆ ಹೀಗೆ ಎಂದು ಕೇಳಿದ್ದೆ— ವಿಚಾರ ಏಬು, ಅಂತ.

ಅವರಲ್ಲಿ ಒಬ್ಬಳು ಆಂಧ್ರದವಳಂತೆ....ಹೆಸರು, ತಾರಾ....ಎತ್ತರ ವಾಗಿದ್ದಳು....ಬಿಗುಪಿನ ಬಲವಾದ ಮೈಕಟ್ಟು....ಕಪ್ಪಗೆ ದಟ್ಟವಾದ ಹುಬ್ಬುಗಳು....ಕೊಡಲಿಯಿಂದ ಕೆತ್ತಿ ಕಡೆದ ಹಾಗೆ ಮುಖ....ಕಾಮ ವನ್ನು ಕೊಡಕೊಡವಾಗಿ ತೆಗೆದು ಎರಚುವ ಎರಡು ಕಣ್ಣು....ಸ್ವಲ್ಪ ದಪ್ಪವೇ ಎನಿಸಿದ ದನಿ.. ಪೈಲ್ವಾನನ ಹಾಗೆ ನಡೆಯುವ ಅವಳ ದೃಢ ಕಾಯವನ್ನು ಕಂಡಾಗಲೆಲ್ಲ ನನಗೆ ಹೆದರಿಕೆಯಾಗುತ್ತಿತ್ತು.

ನಾನು ವಾಸವಾಗಿದ್ದ ಮಹಡಿಯ ಎದುರು ಮಹಡಿಯಲ್ಲೇ ಅವಳು ಇದ್ದದ್ದು. ಅವಳು ಮನೆಯಲ್ಲಿದ್ದಾಳೆಂದು ತಿಳಿದರೆ ಸಾಕು, ನಾನು ನನ್ನ ಕಿಟಕಿಯನ್ನೇ ತೆಗೆಯುತ್ತಿರಲಿಲ್ಲ. ನಾನು ಅವಳನ್ನು ಕಾಣುತ್ತಿದ್ದುದೂ ಅಪರೂಪವಾಗಿ. ಕೆಲವು ವೇಳೆ, ಬಾಗಿಲ ಹತ್ತಿರ ನನ್ನನ್ನು ಕಂಡರೆ, ಮುಖ ನೋಡಿ ನಗುವಳು. ಆ ನಗುವಿನಲ್ಲಿ ಏನೋ ಕುಚೇಷ್ಟೆ, ಏನೋ ಕೃತ್ರಿಮ.

ಆಗಾಗ, ಒಂದೊಂದು ಸಂಜೆ, ಕಳ್ಳು ಕುಡಿದು, ಅಮಲು ತಲೆಗೇರಿ, ಕಣ್ಣು ತೊಳಸುತ್ತ, ತಲೆ ಕೆದರಿಕೊಂಡು, ವಿಕಾರವಾಗಿ ಹಲ್ಲುಕಿರಿಯುತ್ತ ಬಂದು ಮಾತನಾಡುವಳು. "ಏನು ವಿದ್ಯಾರ್ಥಿ ಮಹಾಶಯರೇ!" ಎಂದು ಆವಳ ಮಾಮೂಲು ಸಂಬೋಧನೆ. ಅವಳು ಅರ್ಥವಿಲ್ಲದೆ ಪೆಚ್ಚು ಪೆಚ್ಚಾಗಿ ನಕ್ಕು ಮಾತಾಡಿಸಿದರೆ, ಆವಳ ವಿಷಯದಲ್ಲಿ ನನಗಿದ್ದ ಅಸಹ್ಯ ಇನ್ನೂ ಹೆಚ್ಚುತ್ತಿತ್ತು. ಅಲ್ಪ ಸ್ವಲ್ಪ ಭೀತಿಯೂ ಆಗುತ್ತಿತ್ತು.

ಈ ಸಮಾಗಮಗಳನ್ನು ತಪ್ಪಿಸಿಕೊಳ್ಳಬೇಕೆಂದು ನನಗೇನೋ ಇಷ್ಟವೆ. ಬೇರೆ ಕಡೆ ಒಳ್ಳೇ ರೂಂ ಸಿಕ್ಕಿದ್ದಿದ್ದರೆ ಹೊರಟುಹೋಗ ಬೇಕೆಂದೂ ಇಷ್ಟವೆ. ಆದರೆ, ಚಿಕ್ಕದಾದರೂ ಚೊಕ್ಕವಾದ, ಸಣ್ಣ ದಾದರೂ ಸ್ವತಂತ್ರವಾದ, ಸುಲಭವಾದ ಬಾಡಿಗೆಯ ರೂಂ— ಗಾಳಿ ಬೆಳಕು ಬರುವ ಜಾಗ--ಸದ್ದುಗಲಗು ಗಾಡಿದೂಳು ಅಷ್ಟಾಗಿಲ್ಲದ ಬೀದಿ —ಆದ್ದರಿಂದ ಸಹಿಸಿಕೊಂಡಿದ್ದೆ.

* * * *

ಒಂದು ದಿನ ಬೆಳಗ್ಗೆ, ಚಾಪೆಯ ಮೇಲೆ ಉರುಳಾಡುತ್ತಾ, ಶಾಲೆಗೆ ಚಕ್ಕರ್ ಕೊಡೋಣವೆ ಎಂದು ಯೋಚಿಸುತ್ತಾ ಮಲಗಿದ್ದರೆ—ತಾರಾ ನನ್ನ ರೂಮಿನ ಬಾಗಿಲನ್ನು ಹಿಂದಕ್ಕೆ ತಳ್ಳಿ, ಹೊಸಿಲ ಹತ್ತಿರ ನಿಂತು, ಅವಳ ಆ ದೊಡ್ಡ ಗಂಟಲಿನಿಂದ—(ಅಬ್ಬಾ! ಅದೂ ಅದೆಂಥ ಗಂಟಲು!)—

"ಎದ್ದಿದ್ದೀರಾ, ವಿದ್ಯಾರ್ಥಿ ಮಹಾಶಯರೆ?" ಎಂದು ಗುಡುಗಿದಳು.

ಗಂಟಲು ಗುಡುಗಿದರೂ, ಪಾಪ, ಅದೇಕೊ, ಅವಳ ಮುಖ ದೀನ ವಾಗಿತ್ತು.

"ಏನು ಬೇಕು, ತಾಯಿ?" ಎಂದೆ.

"ಸ್ವಾಮಿ, ನಿಮ್ಮಿಂದ ಒಂದು ಉಪಕಾರ ಆಗಬೇಕು. ದಯಮಾಡಿ ಮಾಡಿಕೊಡುತೀರಾ?" ಎಂದಳು.

ನಾನು ಮಲಗಿದ್ದವನು ಎದ್ದು "ಓಹೊ! ಏನು ಗ್ರಹಚಾರ ಬಂತಪ್ಪಾ ಇವತ್ತು?" ಎಂದುಕೊಂಡೆ.

"ನಮ್ಮ ಊರಿಗೆ ಒಂದು ಕಾಗದ ಬರೆಯಬೇಕು, ಅಷ್ಟೆ" ಎಂದು ಅವಳು ಅಂಜುತ್ತ ಅಂಜುತ್ತ ಕೇಳಿದಳು.

"ನಿನ್ನ ಊರು ಹಾಳಾಯಿತು!" ಎಂದು ಮನಸ್ಸಿನಲ್ಲೇ ಬೈದು ಕೊಂಡು, ಒಂದು ಅರ್ಧಗಜ ಕಾಗದ ಕೈಗೆ ಎಳೆದುಕೊಂಡೆ.

"ಒಳಗೆ ಬನ್ನಿ. ಏನು ಬರೆಯಬೇಕು?" ಎಂದೆ.

ಅವಳು ನಾಚಿಕೊಳ್ಳುತ್ತ ಒಳಗೆ ಬಂದು, ಏನೋ ಮಾಡಬಾರ ದ್ದನ್ನು ಮಾಡುವವಳ ಹಾಗೆ ಮುಖ ಮಾಡುತ್ತಾ, ಚಾಪೆಯ ಅಂಚಿನ ಆಚೆ ನೆಲದ ಮೇಲೆ ಕುಳಿತಳು.

" ಯಾರಿಗೆ ಬರೆಯಬೇಕಮ್ಮ, ಈ ಕಾಗದ?"

" ಅನಂತಪುರದಲ್ಲಿ....ಶ್ರೀಪತಿಗಾರು ರಸ್ತೆಯಲ್ಲಿರುವ....ಮಹಾರಾಜ ಶ್ರೀ....ಬಾಲಯ್ಯನವರಿಗೆ...."

" ಆಯ್ತು. ಆಮೇಲೆ?"

" ಪ್ರಿಯರೆ, ಪ್ರಾಣಪ್ರಿಯರೆ, ಮೋಹನಾಕಾರರೆ, ....ದೇವರು ನಿಮ್ಮನ್ನು ಕಾಪಾಡಲಿ. ನನ್ನ ಮೋಹನದ ಚೆನ್ನರಂಗ, ಇಷ್ಟು ದಿವಸಗಳಾದರೂ ನಿಮ್ಮನ್ನು ನೆನೆಸಿಕೊಂಡು ದುಃಖಪಡುತ್ತಿರುವ ನಿಮ್ಮ ಅರಗಿಳಿ ತಾರೆಗೆ ಒಂದು ಕಾಗದವನ್ನಾದರೂ ಬರೆಯಬಾರದೆ...."

ನನಗೆ ಯಾಕೋ ನಗು ಬರುವ ಹಾಗಾಯಿತು. ಅವಳು, ನಾನು ಹೇಳಿದ ಹಾಗೆ ಒಂದೇ ಸಮನೆ ವಾಕ್ಯರಚನೆಮಾಡದಿದ್ದರೂ, ನಿಮಿಷಕ್ಕೊಂದು ಅಕ್ಷರ ಜೋಡಿಸಿಕೊಂಡೇ ಹೇಳಿದರೂ....'ಅರಗಿಳಿ ತಾರೆಯಂತೆ!'.. ಲಕ್ಷಣವಾಗಿ ಐದೂಕಾಲರ ಮೇಲೆ ಬೆಳೆದಿದ್ದಾಳೆ ತ್ರಿವಿಕ್ರಮಿ ....ಸಾಲದ್ದಕ್ಕೆ ಆ ಗಿಳಿ ಹುಟ್ಟಿದಂದಿನಿಂದ ಹುಣಿಸೇ ಇದ್ದಿಲಿನ ಚೀಲದಲ್ಲಿ ಬಿದ್ದು ಒದ್ದಾಡಿದ ಹಾಗೆ—ಆ ಸುಕುಮಾರದೇಹದ ಶ್ಯಾಮವರ್ಣ.... 'ಅರಗಿಳಿ ತಾರೆಯಂತೆ!'....ಹೇಗೆ ಹೇಗೋ ಬರುವ ನಗುವನ್ನು ತಡೆದುಕೊಂಡು ಕೇಳಿದೆ:

" ಯಾರು— ಈ ಬೋಲಯ್ಯನವರು?"

ನಾನು ಹೆಸರು ತಪ್ಪು ಹೇಳಿದ್ದಕ್ಕಾಗಿ ಅವಳಿಗೆ ಅಸಮಾಧಾನ.

" ಬೋಲಯ್ಯ ಅಲ್ಲ, ವಿದ್ಯಾರ್ಥಿಗಳೆ. ಬಾಲಯ್ಯನವರು. ಅವರು ನನ್ನ ಯಜಮಾನರು."

" ಯಜಮಾನರು!" ಎಂದೆ, ಆಶ್ಚರ್ಯವನ್ನು ತಡೆಯಲಾರದೆ.

" ಯಾಕೆ? ಆಶ್ಚರ್ಯ ಯಾಕೆ? ನನ್ನಂಥ ಹುಡುಗಿಗೆ ಮದುವೆ ಆಗಿರಬಾರದೇನು?" ಎಂದಳು, ಒಂದು ತೆರ ನಿಷ್ಠುರವಾದ ದನಿಯಿಂದ.

" ಇವಳು! ಹುಡುಗೀನೆ! ಸರಿಹೋಯ್ತು!" ಎನ್ನಿಸಿತು. ಆದರೆ ಹಾಗೆ ಹೇಳೋ ಹಾಗಿಲ್ಲ.

"ಓ! ಏಕಾಗಬಾರದು? ಎಂತೆಂತಹುದೋ ಆಗುತ್ತಂತೆ....ಸರಿ, ಎಷ್ಟು ವರ್ಷವಾಯ್ತೋ ಲಗ್ನವಾಗಿ?" ಎಂದೆ,

"ಆರು ವರ್ಷ ಆಯಿತು."

"ಓ! ಓ!....ಸರಿ....ಕಾಗದ ಬರೆಯೋಣ...." ಎಂದೆ.

ನೋಡಿ: ಬಾಯಿಬಿಟ್ಟು ಹೇಳುತ್ತೇನೆ. ಆ ಕಾಗದ ಬರೆಯಿಸಿದ ರೀತಿ, ಅದರ ಒಕ್ಕಣೆಯ ಓರಣ, ಇವನ್ನು ಕೇಳಿದ ಮೇಲೆ.... ಆ ಕಾಗದ ಬರೆಸಿದವಳು ತಾರೆಯಲ್ಲದೆ ಬೇರೆ ಯಾರಾದರೂ ಆಗಿದ್ದಿದ್ದರೆ, ನನಗೇನೋ ಆ ಬಾಲಯ್ಯನಾಗಲು ಆಸೆ ಖಂಡಿತ ಉಂಟಾಗುತ್ತಿತ್ತು. ಅಭಿಜ್ಞಾನ ಶಾಕುಂತಲದ ಮೂರನೇ ಅಂಕದಲ್ಲಿ ಶಕುಂತಲೆ ದುಷ್ಯಂತನಿಗೆ ಪತ್ರ ಬರೆಯುತ್ತಾಳಲ್ಲ—ಅದಕ್ಕೆ ಭಾವಾನುವಾದ ಮಾಡಿದ ಹಾಗಿತ್ತು, ತಾರೆ ಬಾಲಯ್ಯನಿಗೆ ಬರೆಸಿದ ಕಾಗದ.

"ನೀವು ಕಾಗದ ಬರೆದುಕೊಟ್ಟು ತುಂಬ ಸಹಾಯಮಾಡಿದಿರಿ.... ನನ್ನಿಂದ ನಿಮಗೇನಾದರೂ ಸೇವೆ ಆಗುವುದಾಗಿದ್ದರೆ...." ಎಂದು ಕೈ ಮುಗಿದಳು.

"ನಮ್ಮಮ್ಮ! ನಿನ್ನ ಸೇವೆ ನನಗೆ ಯಾವುದೂ ಬೇಡ" ಅಂತ ಮನಸ್ಸಿನಲ್ಲೇ ಅಂದುಕೊಂಡು, "ಪರವಾ ಇಲ್ಲ....ಏನೂ ಅಂತ ಕೆಲಸ ಇಲ್ಲ" ಎಂದೆ.

"ನಿಮ್ಮ ಬಟ್ಟೆ ಗಿಟ್ಟೆ ಏನಾದರೂ .... ಹೊಲಿಯೋದು .... ಒಗೆಯೋದು....ರೂಂ ಗುಡಿಸೋದು....ಇದ್ರೆ ..."

ನನಗೇ ಸಂಕೋಚವಾಯಿತು. ಅವಳಿಂದ ನನಗೆ ಆಗಬೇಕಾದ್ದು ಏನೂ ಇಲ್ಲ ಅಂತ ಖಂಡಿತವಾಗಿ ಹೇಳಿಬಿಟ್ಟೆ. ಕುಳಿತಿದ್ದವನು ಎದ್ದು ನಿಂತೆ. ಅವಳು ಎದ್ದು ಹೊರಟುಹೋದಳು.

* * * *

ಒಂದೆರಡು ವಾರ ಕಳೆಯಿತು.

ಒಂದು ಸಂಜೆ. ರೂಮಿನಲ್ಲಿ ಕುಳಿತು, ಶಿಳ್ಳೆ ಹಾಕುತ್ತ ಏನೋ ಚಿಂತಿಸುತ್ತಿದ್ದೆ. ಬೇಜಾರು. ಮೋಡ ಕವಿದುಕೊಂಡಿತ್ತು. ಹೊರಗೆ ಹೋಗಲು ಮನಸ್ಸಿರಲಿಲ್ಲ. ಮಾಡುವುದಕ್ಕೂ ಏನೂ ಕೆಲಸವಿರಲಿಲ್ಲ.

ಯಾರೋ, ಮುಚ್ಚಿದ್ದ ಬಾಗಿಲನ್ನು ತಳ್ಳಿದಹಾಗಾಯಿತು.

"ಸದ್ಯ! ಯಾರೋ ಬಂದರು!" ಎಂದುಕೊಂಡೆ.

"ಸ್ವಲ್ಪ ವಿರಾಮವಿದೆಯೇ, ವಿದ್ಯಾರ್ಥಿಗಳೇ?" ಎಂದು ಗುಡುಗುತ್ತಾ ತಾರಾ ಬಂದಳು.

ಬೆಚ್ಚಿದಂತೆ ಎದ್ದು ಕುಳಿತು, ಸ್ವಲ್ಪ ಗಡುಸಾಗಿಯೇ "ಇಲ್ಲ. ವಿರಾಮವಿಲ್ಲ. ಯಾಕೆ?" ಎಂದೆ.

"ಇನ್ನೊಂದು ಕಾಗದ ಬರೆದುಕೊಡುತ್ತೀರಾ ಅಂತ ಕೇಳೊಕ್ಕೆ ಬಂದೆ."

ಇದೇನಿದು ನಳದಮಯಂತಿ ಕತೇನೆ? ಅಥವಾ, ನಾನೇನು ರಾಜ ಹಂಸಾನೆ? ಎನ್ನಿಸಿತು, ನನಗೆ.

"ಹುಂ! ಯಾರಿಗೆ? ಬಾಲಯ್ಯನವರಿಗೋ?"

"ಅಲ್ಲ. ಈ ಸಲ ಅವರ ಕಡೇಂದ ಒಂದು ಕಾಗದ ಬರೀಬೇಕು."

"ಏ....ನು?!" ಎಂದೆ-- ಹೇಳಿದ್ದು ಅರ್ಥವಾಗದೆ, ಕೇಳಿದ್ದನ್ನು ಕಿವಿ ನಂಬದೆ.

ತಾರಾ ಬೆದರುಬೆದರಾಗಿ ನಗುತ್ತ ಹೇಳಿದಳು:

"ಅಯ್ಯೋ! ನಾನೊಂದು ಪೆಚ್ಚು! ಕ್ಷಮಿಸಿ....ನನಗಲ್ಲ ಆ ಕಾಗದ. ನನ್ನ ಸ್ನೇಹಿತೆಗಾಗಿ....ಅಂದರೆ....ಸ್ನೇಹಿತೆಯಲ್ಲ....ಗುರುತು .. ಪರಿಚಯ ... ಸ್ನೇಹಿತ....ಅವನಿಗಾಗಿ. ಅವನಿಗೆ ನನ್ನ ಹಾಗೇ ತಾರೆ ಅನ್ನೋ ಹೆಂಡತಿ ಇದ್ದಾಳೆ .... ಗೊತ್ತಾಯ್ತೆ?.... ಆ ತಾರೆಗೆ ಇವನ ಕಡೇಂದ ಒಂದು ಕಾಗದ ಬರೆದುಕೊಡುತೀರಾ?"

ಅವಳ ಮುಖ ನೋಡಿದೆ. ಮುಖ ಪೆಚ್ಚಾಗಿತ್ತು. ಅವಳ ಕೈಕಾಲು ನಡುಗುತ್ತಿತ್ತು. ಮೊದಲು ಮೊದಲು ನನಗೆ ಅರ್ಥವಾಗಲಿಲ್ಲ. ಆಮೇಲೆ ಏನೋ ಬೆಳಕು ಹೊಳೆದಹಾಗಾಯಿತು.

"ಇಲ್ಲಿ ನೋಡಮ್ಮ! ಬಾಲಯ್ಯ ಅನ್ನೋವ್ರು ಯಾರೂ ಇಲ್ಲ. ನಿನ್ನ ಸ್ನೇಹಿತನೂ ಇಲ್ಲ. ಅವನಿಗೆ ತಾರೆ ಅನ್ನೋ ಹೆಂಡತೀನೂ ಇಲ್ಲ. ನೀ ಹೇಳುತಿರೋದೆಲ್ಲ ಶುದ್ಧ ಸುಳ್ಳು, ಅಬದ್ಧ. ಇದೆಲ್ಲಾ ನೀನು ಇಲ್ಲಿಗೆ ಬರೋದಕ್ಕೆ ಒಂದು ಕಳ್ಳನೆಪ. ನೀನು ಇನ್ನೊಂದು ಸಲ ಇಲ್ಲಿ ಬರ ಕೂಡದು, ತಿಳೀತೋ? ಬಂದರೆ—ಕೂಗಿಕೊಂಡುಬಿಡ್ತೇನೆ. ನೀನು ಇಲ್ಲಿ ಇನ್ನು ಮೇಲೆ ಬರಕೂಡದು, ತಿಳೀತೊ?" ಎಂದೆ.

ಅವಳು ಗಾಬರಿ ಬಿದ್ದಳು. ಪರದಾಡಿದಳು. ನಿಂತ ಕಡೆಯಿಂದ ಕದಲದೇನೇ ವಿಲವಿಲ ಒದ್ದಾಡಿಹೋದಳು. ಏನೋ ಹೇಳಬೇಕು ಅಂತ ಹೋಗುವಳು, ಹೇಳುವುದಕ್ಕೆ ಮಾತು ಬರದು; ಬಹಳ ಅವಸ್ಥೆಪಟ್ಟಳು.

ಅವಳ ಅವಸ್ಥೆಯನ್ನು ನೋಡಿದೆ. ನನ್ನನ್ನು ಕೆಟ್ಟದಾರಿಗೆ ಎಳೆಯೋಕೆ ಅವಳು ಬಂದಿದ್ದಾಳೆ ಅನ್ನೋ ನನ್ನ ಅಭಿಪ್ರಾಯ ತಪ್ಪು ಅಂತ ಅನ್ನಿಸಿತು. ಅವಳ ಈ ಒದ್ದಾಟಕ್ಕೆ ಇನ್ನೇನೋ ಕಾರಣ ಇರಬೇಕು, ಅನ್ನಿಸಿತು.

ಏನೋ ಹೇಳಬೇಕು ಎಂದು ಹೊರಟಿದ್ದವಳು, ಇದ್ದಕ್ಕಿದ್ದ ಹಾಗೆ ಕೈಕೊಡವುತ್ತ, ಏನೂ ಹೇಳದೆಯೇ ಬಾಗಿಲ ಕಡೆ ತಿರುಗಿ, ಹೊರಟೇ ಹೋದಳು.

ನನಗೋ ಮನಸ್ಸು ಸಮಾಧಾನವಿಲ್ಲ. ಅವಳು ಮೆಟ್ಟಲು ಇಳಿದ ಸದ್ದು ಕೇಳಿಸಿತು. ಎದುರುಮನೆಯ ಮಹಡಿಯ ಬಾಗಿಲು ರಾಚಿಬಡಿದ ಶಬ್ದವೂ ಕೇಳಿಸಿತು. "ಪಾಪ! ಅವಳಿಗೆ ಕೋಪಬಂದಿರಬೇಕು!" ಎನ್ನಿಸಿತು.

ಹಾಗೇ ಯೋಚಿಸಿ, ಅವಳ ಮಹಡಿಗೆ ಹೋಗಿ, ಅವಳನ್ನು ಕರೆದು, ಅವಳಿಗೆ ಬೇಕಾದ್ದೆಲ್ಲವನ್ನೂ ಬರೆದುಕೊಡುವುದು, ಎಂದು ನಿಶ್ಚಯಿಸಿದೆ.

ಅವಳಿದ್ದ ರೂಮಿಗೆ ಹೋದೆ. ಸುತ್ತಲೂ ನೋಡಿದೆ. ಅವಳು ಅಲ್ಲಿ ನೆಲದ ಮೇಲೆ ಕುಳಿತು, ಮೊಣಕಾಲುಗಳ ಮಧ್ಯೆ ತಲೆಯನ್ನು ಮರೆಮಾಡಿಕೊಂಡಿದ್ದಳು.

"ನೋಡಮ್ಮ! ಇಲ್ಲಿ ಕೇಳು" ಎಂದೆ.

ನನಗೆ ಈ ಕತೆಯ ಈ ಭಾಗಕ್ಕೆ ಬಂದಾಗಲೆಲ್ಲಾ ಯದ್ವಾತದ್ವಾ ಆಗಿಬಿಡುತ್ತೆ.

"ಇಲ್ಲಿ ಕೇಳು" ಎಂದೆ, ಮತ್ತೆ.

ಅವಳು ಧಿಗ್ಗನೆ ಮೇಲೆದ್ದು, ಕಣ್ಣುಗಳನ್ನು ಬಿರಿಬಿರಿ ಬಿಟ್ಟು, ಹತ್ತಿರ ಎರಡು ಹಜ್ಜೆ ಬಂದು, ತನ್ನ ಯಥಾಪ್ರಕಾರ ದಪ್ಪದನಿಯಲ್ಲಿ—

"ಹೌದು! ಬಾಲಯ್ಯನವರೂ ಇಲ್ಲ! ಸ್ನೇಹಿತನೂ ಇಲ್ಲ! ತಾರೆಯೂ ಇಲ್ಲ!....ಆದರೆ. ಅದು ಕಟ್ಟಿಕೊಂಡು ನಿಮಗೆ ಏನಾಗಬೇಕು?

....ಕಾಗದದ ಮೇಲೆ ಎರಡು ಅಕ್ಷರ ಗೀಚುವುದು ಕಷ್ಟವೆ ನಿಮಗೆ? ಹೂಂ? ಅದರಲ್ಲೂ ನಿಮಗೆ! ಇನ್ನೂ ಈ ಪ್ರಾಯದವರಿಗೆ!........ಹೌದು! ಬಾಲಯ್ಯನವರೂ ಇಲ್ಲ! ಸ್ನೇಹಿತನೂ ಇಲ್ಲ! ತಾರೆಯೂ ಇಲ್ಲ!.... ಹೇಳಿದೆನಲ್ಲ ಈಗ! ತೃಪ್ತಿಯಾಯಿತೆ ನಿಮಗೆ?" ಎಂದು ಸುರಿಮಳೆ ಕರೆದಳು.

ನಾನು ಹೀಗಾಗುತ್ತೆ ಎಂದು ಎಣಿಸಿರಲಿಲ್ಲ. ಕಕ್ಕಾಬಿಕ್ಕಿಯಾದೆ.

"ತಪ್ಪಾಯಿತಮ್ಮ. ತಪ್ಪಾಯಿತು. ಇದೇನು ಮತ್ತೆ, ಬಾಲಯ್ಯ ನವರೂ ಇಲ್ಲ ಎನ್ನುತ್ತೀಯಲ್ಲ— ಮೊನ್ನೆ ತಾನೆ ಅವರಿಗೆ ಒಂದು ಕಾಗದ ಬರೆಸಿ?"

"ಇಲ್ಲ. ಬಾಲಯ್ಯನವರು ಇಲ್ಲ."

"ತಾರೆ?"

"ತಾರೆಯೂ ಇಲ್ಲ. ನಾನೇ ತಾರೆ."

ನನಗೆ ಬಗೆ ಹರಿಯಲಿಲ್ಲ. ಅವಳನ್ನೇ ನೋಡುತ್ತ, ನಮ್ಮಿಬ್ಬರಲ್ಲಿ ಯಾರಿಗೋ ಬುದ್ಧಿ ಕೆಟ್ಟಿರಬೇಕು - ಎಂದು ಯೋಚಿಸುತ್ತಿದ್ದೆ.

ಅಷ್ಟರಲ್ಲಿ ಅವಳು ಒಳಗೆ ಹೋಗಿ, ಪೆಟ್ಟಿಗೆಯಲ್ಲಿ ಏನೋ ಹುಡುಕಿ, ತಂದು, ನನ್ನ ಮುಂದೆ ಇಟ್ಟು, ಬಹಳ ಅಸಮಾಧಾನದಿಂದ—

"ಇದೊ! ಬಾಲಯ್ಯನವರಿಗೆ ನೀವು ಬರೆದದ್ದು ಅಷ್ಟು ಕಷ್ಟ ವಾಗಿದ್ದರೆ, ನಿಮ್ಮ ಕಾಗದ ನೀವೇ ತೆಗೆದುಕೊಳ್ಳಿ! ನೀವಿಲ್ಲದಿದ್ದರೆ, ಇನ್ನು ಯಾರಾದರೂ ಬರೆದುಕೊಡುತ್ತಾರೆ, ಇನ್ನೊಂದು ಕಾಗದವನ್ನ!" ಎಂದಳು.

ನೋಡಿದರೆ, ನಿಜವಾಗಿಯೂ ಅದು ನಾನು ಬಾಲಯ್ಯನವರಿಗೆಂದು ಬರೆದ ಕಾಗದವೇ! ಅರ್ಥವಾಗಲಿಲ್ಲ.

"ಕೇಳಮ್ಮ, ತಾರಾ! ಏನು ಇದೆಲ್ಲಾ? ನಾನು ಬರೆದು ಕೊಟ್ಟ ಈ ಕಾಗದವನ್ನೇ ನೀನು ಕಳುಹಿಸದಿರುವಾಗ, ಇನ್ನೊಬ್ಬರಿಂದ ಇನ್ನೊಂದು ಕಾಗದ ಏಕೆ ಬರೆಸಬೇಕು?"

"ಎಲ್ಲಿಗೆ ಕಳುಹಿಸಲಿಲ್ಲ, ನಾನು?"

"ಅದೇ, ಈ ಬಾಲಯ್ಯನವರಿಗೆ!"

" ಅಂತ ಮನುಷ್ಯನೇ ಇಲ್ಲವಲ್ಲ !"

ನಿಶ್ಚಯವಾಗಿ ನನಗೇನೂ ಅರ್ಥವಾಗಲಿಲ್ಲ. ಬೇಜಾರಾಯಿತು. ಹೊರಟುಹೋಗೋಣವೆಂದಿದ್ದೆ. ಅಷ್ಟರಲ್ಲಿ ಅವಳೇ ಹೇಳಿದಳು. ಅವಳಿಗಿನ್ನೂ ಅಸಮಾಧಾನ.

" ಇದರಲ್ಲಿ ಏನು ಇಷ್ಟು ಆಶ್ಚರ್ಯ ? ನಾನು ಸಾರಿ ಸಾರಿ ಹೇಳುತ್ತೇನೆ : ಬಾಲಯ್ಯ ಎನ್ನುವವರು ಯಾರೂ ಇಲ್ಲ....ಅದೇಕೆ ಇಲ್ಲವೋ ನಾ ಕಾಣೆ....ಆದರೆ ಅಂತವರು ಇರಬೇಕು ಎಂದು ನನ್ನ ಆಸೆ.... ಮಿಕ್ಕವರ ಹಾಗೆ ನಾನೂ ಮನುಷ್ಯಳಲ್ಲಾ ?....ನಾನು ಈ ತೆರದ ಕಾಗದಾನ ಅವರಿಗೆ ಬರೆದರೆ ಅದರಿಂದ ಯಾರಿಗೇನು ಕೇಡು? ಅದರಿಂದ ಯಾರಿಗೇನು ನಷ್ಟ ? ಇದರಲ್ಲಿ ಏನು ತಪ್ಪು ?"

" ಅವರಿಗೆ ಎಂದರೆ, ಯಾರಿಗಮ್ಮ ?"

" ಅವರಿಗೇ ! ಬಾಲಯ್ಯನವರಿಗೆ !"

" ಆದರೆ ಬಾಲಯ್ಯನವರು ಅಂತ ಇಲ್ಲ ಎಂದೆಯಲ್ಲವೆ ?"

" ಅಯ್ಯೋ ! ಅಯ್ಯೋ ! ಅವರು ಇಲ್ಲದಿದ್ದರೆ ಏನಂತೆ ! ಅವರು ಇಲ್ಲದಿದ್ದರೂ **ಇರಬಹುದಷ್ಟೆ ! ಏಕಿರಬಾರದು ?** ನಾನು ಅವರಿಗೆ ಇವತ್ತು ಬರೆಯುತ್ತೇನೆ. ಆದ್ದರಿಂದ ಅವರು ಇದ್ದ ಹಾಗಾಯಿತು.... ನಾಳೆ ನನಗೆ ಅವರು ಬರೆಯುತ್ತಾರೆ. ಎಂದರೆ ನಾಳೆಯೂ ಅವರು ಇದ್ದ ಹಾಗಾಯಿತು....ಮತ್ತೆ ತಿರಿಗೂ ನಾನು ಅವರಿಗೆ ಬರೆಯುತ್ತೇನೆ...."

ಆಗ ನನಗೆ ಅರ್ಥವಾಯಿತು. ನನ್ನ ಬುದ್ಧಿಗೆ ನನಗೇ ಅಸಹ್ಯವಾಯಿತು, ದುಃಖವಾಯಿತು, ನಾಚಿಕೆಯಾಯಿತು. ಅಲ್ಲಾ....ನಾನಿದ್ದ ಬೀದಿಯಲ್ಲಿಯೋ, ನನ್ನ ಎದುರಿನ ಮಹಡಿಯಲ್ಲಿಯೋ, ಈ ಪ್ರಾಣಿ ಬದುಕಿದ್ದಾಳೆ. ಆದರೆ, ಅವಳನ್ನು ಪ್ರೀತಿಸುವ, ಅವಳಿಗಾಗಿ ಮರುಗುವ, ಅವಳಿಗೆ ಸಹಾನುಭೂತಿತೋರುವ ಪ್ರಾಣಿಯೊಂದೂ ಈ ಪ್ರಪಂಚದಲ್ಲಿಲ್ಲ. ಆದರೂ, ಅವಳು ತನಗಾಗಿ ತಾನು ಇದ್ದ ಕಡೆಯೇ ಒಬ್ಬ ಆಪ್ತನನ್ನು ತಾನೇ ನಿರ್ಮಿಸಿಕೊಂಡಿದ್ದಳು !

ತಾರಾ ಮತ್ತೆ ಹೇಳಿದಳು :

" ಇದೋ ಕೇಳಿ. ನೀವು ಬಾಲಯ್ಯನವರಿಗೆ ಒಂದು ಕಾಗದ

ಬರೆದುಕೊಟ್ಟರಿ. ನಾನು, ಇದನ್ನು ನನಗೆ ಓದಿ ಎಂದು ಇನ್ಸ್ಪೆಕ್ಟರ ಕೈಗೆ ಕೊಟ್ಟೆ. ಅವರು ಅದನ್ನು ಓದುವಾಗ, ಬಾಲಯ್ಯ ಎಂಬುವರು ಇದ್ದಾರೆ ಎಂದೇ ನನಗೆ ಭ್ರಮೆಯಾಯಿತು. ಆಮೇಲೆ ನಾನು ಬಾಲಯ್ಯ ನವರಿಂದ ತಾರೆಗೆ—ಎಂದರೆ ನನಗೆ—ಒಂದು ಕಾಗದ ಬರೆಯುವಂತೆ ನಿಮ್ಮನ್ನು ಕೇಳಿಕೊಂಡೆ. ಅಂಥ ಕಾಗದವನ್ನು ಬರೆಸಿ, ಅದನ್ನು ಓದಿಸಿ ಕೇಳಿದರೆ, ಬಾಲಯ್ಯನವರು ಇರುವರೆಂದು ನಿರ್ಧರವಾಗುವುದು. ಇದರಿಂದ ನನ್ನ ಒಂಟಿಬದುಕಿಗೆ ಜೊತೆ ಸಿಕ್ಕಿ, ಬಾಳು ಹಗುರವಾಗುತ್ತದೆ. ಜೀವಿಸುವುದು ಸುಲಭವಾಗುತ್ತದೆ."

ಅದನ್ನು ಕೇಳಿ, "ನನ್ನ ಬುದ್ಧಿಗೆ ಮಂಡೆಮೋಚಿತು" ಎಂದು ನನ್ನನ್ನು ನಾನೇ ಬೈದುಕೊಂಡೆ.

ಅಂದಿನಿಂದ ಕ್ರಮವಾಗಿ ತಪ್ಪದೆ, ವಾರಕ್ಕೆರಡು ಸಾರಿ, ಬಾಲಯ್ಯನವರಿಂದ ತಾರೆಗೆ ಒಂದು ಕಾಗದ, ತಾರೆಯಿಂದ ಬಾಲಯ್ಯನವರಿಗೆ ಒಂದು ಕಾಗದ ಬರೆದುಕೊಡುತ್ತಿದ್ದೆ. ಕಾಗದಗಳನ್ನು ತಕ್ಕ ಮಟ್ಟಿಗೆ ಚೆನ್ನಾಗಿಯೇ ಬರೆಯುತ್ತಿದ್ದೆ. ಅವಳು ಅವುಗಳನ್ನು ಅವರಿವರಿಂದ ಓದಿಸಿ ಕೇಳುವಳು; ಅಳುವಳು, ಆನಂದಪಡುವಳು. ಹೀಗೆ, ಕಲ್ಪನೆಯ ಬಾಲಯ್ಯನವರನ್ನು ಪತ್ರಗಳ ಮೂಲಕ ಪ್ರತ್ಯಕ್ಷಮಾಡಿಕೊಳ್ಳುವುದಕ್ಕೆ ನಾನು ಸಹಾಯಮಾಡಿದೆನೆಂದು, ಅವಳು ಆಗಾಗ ನನ್ನ ಬಟ್ಟೆಗಳನ್ನು ಬಲವಂತದಿಂದ ಮಡಿಮಾಡಿ ಕೊಡುತ್ತಿದ್ದಳು.

ಇದಾದ ಮೂರು ತಿಂಗಳಿನ ಮೇಲೆ, ಅದು ಏಕೋ ಏನೋ, ಪೋಲೀಸಿನವರು ಅವಳನ್ನು ಹಿಡಿದುಕೊಂಡು ಹೋದರು. ಈ ವೇಳೆಗೆ ಬಹುಶಃ ಅವಳು ಸತ್ತುಹೋಗಿರಬೇಕು.

* * * *

ನನ್ನ ಪರಿಚಯದವನು ಈ ಕತೆಯನ್ನು ಹೇಳಿ, ಮೇಲೆ ನೋಡುತ್ತಾ, ಹೀಗೆ ಮುಗಿಸಿದನು:

"ಮನುಷ್ಯನಿಗೆ, ಕಷ್ಟಗಳಲ್ಲಿ ಎಷ್ಟೆಷ್ಟು ಸಿಕ್ಕಿ ಒದ್ದಾಡುತ್ತಿದ್ದರೆ, ಅಷ್ಟಷ್ಟೂ ಬದುಕಿನಲ್ಲಿ ಸುಖಪಡಬೇಕೆಂಬ ಆಸೆ ಹೆಚ್ಚುತ್ತದೆ. ಆದರೆ, ನಾವು, ಇದೆಯೋ ಇಲ್ಲವೋ ಎನ್ನುವಷ್ಟು ಒಳ್ಳೆಯ ಗುಣಗಳನ್ನಿಟ್ಟು

ಕೊಂಡು, ದುರಹಂಭಾವದಿಂದಲೂ ಸೊಕ್ಕಿನಿಂದಲೂ ಇತರರನ್ನು ನೋಡಿ ಎಲ್ಲಾ ಚೆನ್ನಾಗಿದೆ, ಎಂದುಕೊಂಡುಬಿಡುತ್ತೇವೆ. ಇದರಿಂದ ಕೊನೆಗೆ ಆಗುವುದು ದುಃಖವೊಂದೇ.

"ನಾವು ಕೆಲವರನ್ನು 'ಕೀಳುಜನ' ಎನ್ನುತ್ತೇವೆ. ಕೀಳುಜನ ಯಾರು ಎಂಬುದನ್ನು ಸ್ವಲ್ಪ ಹೇಳುತ್ತೀರಾ? ಅವರೂ ನಮ್ಮ ಹಾಗೆಯೇ ಮೂಳೆ, ಮಾಂಸ, ರಕ್ತ, ನರಗಳಿಂದ ಆದವರು. ಇದನ್ನು ನಮಗೆ ಅನಾದಿಕಾಲದಿಂದ ದಿನದಿನವೂ ಹೇಳುತ್ತಿದ್ದರೆ, ಕಿವಿಕೊಟ್ಟು ನಾವೂ ಕೇಳುತ್ತಿದ್ದೇವೆ. ಇದೆಲ್ಲ ಎಷ್ಟು ಭೀಕರ ಎಂಬುದೂ ಗೊತ್ತು. ಅಥವಾ, ಕನಿಕರ ಶಾಂತಿ ಇವುಗಳನ್ನು ಕುರಿತು ಘಂಟಾಘೋಷವಾಗಿ ನಡಸುವ ಭಾಷಣಗಳನ್ನು ಕೇಳಿಕೇಳಿ ನಾವು ತೀರ ಕುಲಕೆಟ್ಟಿರುವೆವೊ? ಸಾವಧಾನ ದಿಂದ ಹಾಗೇ ನೋಡಿದರೆ....ನಾವು ಉತ್ತಮರಲ್ಲ, ನಾವೂ ಕೀಳುಜನವೇ, ನಾವು ಹಿರಿಯರು ಎಂಬ ದುರಹಂಕಾರದ ಹಳ್ಳದಲ್ಲಿ ಉರುಳಿರುವವರು. ಸಾಕು ಇನ್ನು, ಇಂಥ ಮಾತು. ಇದೆಲ್ಲಾ ಹಳೆಯಪುರಾಣ....ತೀರ ಹಳೆಯದು....ಅದರ ವಿಚಾರ ಮಾತನಾಡಲು ಕೂಡ ನಾಚಿಕೆಯಾಗುತ್ತೆ ....ಹೌದು....ಬಹಳ ಹಳೆಯದು ...ಹೌದು ...ತುಂಬಾ....ಬಹಳ...."

# ಮೂಮಣ್ಣ

ಒಂದು ದಿವಸ ಮೂಮಣ್ಣನಿಗೆ "ನಾನು ಸಂಪೂರ್ಣ ಬುದ್ಧಿವಂತನಾಗಿ, ಸಂಪೂರ್ಣ ವಿವೇಕಿಯಾಗಿ ಇದ್ದುಬಿಡಬೇಕು" ಎಂದು ಒಂದು ಬರಬಾರದ ಬುದ್ಧಿ ಬಂತು. ಇಂಥ ಬುದ್ಧಿ ಎಲ್ಲರ ಮನಸ್ಸಿನಲ್ಲಿ ಒಂದಲ್ಲ ಒಂದು ಸಲ ಹಾಗೆ ಹೀಗೆ ಓಡಿಯಾಡಿರುತ್ತದೆ.

ಮೂಮಣ್ಣ ತನಗೆ ತಾನೇ ಹೇಳಿಕೊಂಡ :

" ತುಂಬ ಬುದ್ಧಿವಂತನಾದರೆ ತುಂಬ ಸುಖವಾಗಿರಬಹುದು. ತುಂಬ ಬುದ್ಧಿವಂತನಾಗಬೇಕಾದರೆ, ರಾಗದ್ವೇಷಗಳು ಒಂದೂ ಇರಬಾರದು. ರಾಗದ್ವೇಷಗಳು ಇಲ್ಲದಂತೆ ನೋಡಿಕೊಳ್ಳುವುದು, ಎಲ್ಲರಿಗೂ ತಿಳಿದ ಹಾಗೆ, ತುಂಬ ಸುಲಭ....

"ಮೊದಲನೆಯದಾಗಿ—ಹೆಂಗಸರನ್ನು ಪ್ರೀತಿಸದಿದ್ದರಾಯಿತು. ಯಾರಾದರೂ ಸುಂದರಿಯಾದವಳನ್ನು ಕಂಡರೆ, 'ಈ ಕಣ್ಣು ಎಂದಿದ್ದರೂ ಒಂದು ದಿನ ಗುಳಿಬಿದ್ದು ಹೋಗುತ್ತದೆ, ಈ ತುಂಬಿದ ಎದೆ ಎಂದಿದ್ದರೂ ಬತ್ತಿಯೇ ಹೋಗುತ್ತದೆ, ಈ ಸೊಗಸಾದ ತಲೆಕೂದಲು ಎಂದಿದ್ದರೂ ಬೆಳ್ಳಗಾಗಿ ಉದುರಿಹೋಗುತ್ತದೆ' ಎಂದುಕೊಳ್ಳುತ್ತೇನೆ. ಇನ್ನು ಹತ್ತು ವರ್ಷ ಆದ ಮೇಲೆ ಆ ಸುಂದರಿ ಹೇಗಾಗುವಳೆಂದು ಈಗಲೇ ಅಂದುಕೊಂಡು ಕಂಡರೆ, ಯಾವ ಸುಂದರಿಯ ಪಾಶಕ್ಕೂ ನಾನು ಬೀಳುವುದು ಸಾಧ್ಯವಿಲ್ಲ....

"ಎರಡನೆಯದಾಗಿ—-ನಾನು ಎಂದಿಗೂ ಮಾದಕದ್ರವ್ಯಗಳನ್ನು ಮುಟ್ಟುವುದಿಲ್ಲ, ನನ್ನ ಸ್ಥಿಮಿತವನ್ನು ಕಳೆದುಕೊಳ್ಳುವುದಿಲ್ಲ. ಆಟ ಪಾಟಗಳಾಗಲಿ, ಕುಡಿದು ಕೇಕೆ ಹಾಕುವುದಾಗಲಿ, ಅದಕ್ಕೂ ನನಗೂ ಸಂಬಂಧವಿಲ್ಲ. ಮಿತಿಮಿೀರಿ ಕುಡಿದರೆ ಬುದ್ಧಿ ಹೇಗೆ ಕೆಡುತ್ತದೆ, ಜಗಳ ಹೇಗೆ ಆಗುತ್ತದೆ, ದ್ರವ್ಯ ಹಾನಿಯೇನು, ಮಾನಹಾನಿಯೇನು, ಆರೋಗ್ಯದ ನಷ್ಟವೇನು, ಹೊತ್ತು ಹಾಳಾಗುವುದೆಷ್ಟು, ಇದನ್ನೆಲ್ಲ ಎಂದಿಗೂ ಮರೆ

ಯಾದೆ ಇದ್ದರಾಯಿತು. ಇದು ಎಷ್ಟು ಸುಲಭ ಎಂದರೆ—ಈ ರೀತಿ ನಡೆಯುವುದಕ್ಕೆ ಏನೂ ಕಷ್ಟಪಡಬೇಕಾದದ್ದಿಲ್ಲ....

"ಮುಂದಿನದಾಗಿ--ನನಗಿರುವ ಐಶ್ವರ್ಯವನ್ನು ಸ್ವಲ್ಪ ಜೋಪಾನವಾಗಿ ನೋಡಿಕೊಳ್ಳಬೇಕು. ನನಗೆ ಏನೂ ಹೆಚ್ಚಿನ ದುಂದುವೆಚ್ಚಗಳಿಲ್ಲ. ಇರುವ ಆಸ್ತಿಯನ್ನೆಲ್ಲಾ ಈ ಊರಿನ ಸಾಹುಕಾರನ ಕೈಗೆ ಒಳ್ಳೇ ಬಡ್ಡಿಗೆ ಕೊಟ್ಟಿದ್ದೇನೆ. ಸ್ವತಂತ್ರನಾಗಿ ಯಾರ ಹಂಗೂ ಇಲ್ಲದೆ ಬದುಕುವುದಕ್ಕೆ ಎಷ್ಟು ಬೇಕೋ ಅಷ್ಟು ಉತ್ಪತ್ತಿ ಬರುತ್ತಿದೆ. ಅಷ್ಟಿದ್ದ ಮೇಲೆ ನಾನು ಯಾರಿಗೂ ಕಾಲು ಹಿಡಿಯಬೇಕಾಗಿಲ್ಲ, ಹಲ್ಲು ಗಿಂಜಬೇಕಾಗಿಲ್ಲ, ಮುಖಸ್ತುತಿ ಮಾಡಬೇಕಾಗಿಲ್ಲ. ನಾನು ಯಾರನ್ನು ಕಂಡೂ ಹೊಟ್ಟೆಕಿಚ್ಚು ಪಡುವುದಿಲ್ಲ, ನನ್ನನ್ನು ಕಂಡು ಯಾರಿಗೂ ಹೊಟ್ಟೆಕಿಚ್ಚು ಇರುವುದಿಲ್ಲ....

"ನನಗೆ ಸ್ನೇಹಿತರು ಇದ್ದಾರೆ. ಅವರನ್ನು ಉಳಿಸಿಕೊಳ್ಳುತ್ತೇನೆ. ಅವರೊಂದಿಗೆ ಎಂದೂ ಸಿಡುಕುವುದಿಲ್ಲ, ಕೋಪಿಸಿಕೊಳ್ಳುವುದಿಲ್ಲ. ಅವರೂ ನನ್ನೊಡನೆ ಕೋಪಮಾಡುವುದಿಲ್ಲ. ಹೀಗಿದ್ದರೆ ಯಾರಿಗೂ ಏನೂ ತೊಂದರೆಯಿಲ್ಲ. ಹೀಗಿರುವುದಕ್ಕೆ ಏನೂ ಕಷ್ಟಪಡಬೇಕಾದ್ದಿಲ್ಲ."

ಮಾಮಣ್ಣ ಹೀಗೆ ತನ್ನ ಬುದ್ಧಿವಂತಿಕೆಯ ಯೋಜನೆಯನ್ನೂ ವಿವೇಕದ ಕಾರ್ಯಕ್ರಮವನ್ನೂ ತನ್ನ ಕೊಠಡಿಯಲ್ಲಿ ನಿಶ್ಚಯಿಸಿಕೊಂಡ ಹೊತ್ತಿನಲ್ಲಿಯೇ, ಅವನ ಮನೆಯ ಹತ್ತಿರ ಮರಗಳ ನೆರಳಿನಲ್ಲಿ ಯಾರೋ ಹೆಂಗಸರಿಬ್ಬರು ನಡೆದಾಡುತ್ತಿದ್ದರು. ಮಾಮಣ್ಣ ಅವರನ್ನು ಕಂಡ.

ಅವರಲ್ಲಿ ಒಬ್ಬಳು ಮುದುಕಿ, ಒಬ್ಬಳು ಹುಡುಗಿ. ಮುದುಕಿಗೆ ಮುಖದಲ್ಲಿ ಏನೋ ಚಿಂತೆ, ಹುಡುಗಿಗೆ ಮುಖದಲ್ಲಿ ಏನೋ ವ್ಯಸನ. ಹುಡುಗಿ ಒಮ್ಮೊಮ್ಮೆ ನಿಟ್ಟುಸಿರು ಬಿಡುವಳು, ಒಮ್ಮೊಮ್ಮೆ ಕಣ್ಣೀರು ಕರೆವಳು. ಅವಳು ನಿಟ್ಟುಸಿರುಬಿಟ್ಟಷ್ಟೂ, ಅವಳು ಕಣ್ಣೀರು ಸುರಿಸಿದಷ್ಟೂ ಇನ್ನೂ ಚೆಲುವೆಯಾಗಿ ಕಾಣುವಳು.

ನಮ್ಮ ಮಹಾಬುದ್ಧಿ, ಮಾಮಣ್ಣ, ಇಂಥ ಚೆಲುವೆಯರಿಗೆಲ್ಲ ಮರುಳಾಗತಕ್ಕವನಲ್ಲ. ಖಂಡಿತ ಅಲ್ಲ. ಆದರೆ ಅವಳ ದುಃಖವನ್ನು ಕಂಡು ಮರುಗದೆ ಇರುವ ಕಠಿನಹೃದಯ ಅವನದಲ್ಲ. ಬಡಬಡನೆ ಕೆಳಗೆ ಇಳಿದು ಬಂದವನೆ, ಅವರನ್ನು ವಿಶ್ವಾಸದಿಂದ ಮಾತನಾಡಿಸಿದ.

" ಏನಮ್ಮ? ಏನು ಕಷ್ಟ? ಏನಾಗಬೇಕು?" ಎಂದ.

ಆ ಚೆಲುವೆ, ಮಾತು ಹೆಚ್ಚು ಇಲ್ಲ; ಬಹಳ ಸುಲಭವಾಗಿ, ಸರಳವಾಗಿ, ಲಲಿತವಾಗಿ ತನ್ನ ಕಷ್ಟಗಳನ್ನೆಲ್ಲಾ ಮಾಮಣ್ಣನ ಕಿವಿಗೆ ಹೇಳಿಕೊಂಡಳು. ಅವಳ ಸೋದರಮಾವನಂತೆ, ತುಂಬ ದುಷ್ಟನಂತೆ, ಅವಳ ಆಸ್ತಿಯನ್ನೆಲ್ಲಾ ಆಹುತಿ ತೆಗೆದುಕೊಂಡಿದ್ದನಂತೆ, ಅವನನ್ನು ಕಂಡರೆ ಅವಳಿಗೆ ಜೀವಭೀತಿಯಂತೆ.

ಅಯ್ಯೋ ಪಾಪ! ತನಗೆ ಆಸ್ತಿ ಏನೂ ಇಲ್ಲ, ತನಗೆ ಸೋದರ ಮಾವ ಯಾರೂ ಇಲ್ಲ, ಎಂದು ಮಾತ್ರ ಅವಳು ಹೇಳಿಕೊಳ್ಳಲಿಲ್ಲ.

"ನಿಮ್ಮನ್ನು ನೋಡಿದರೆ ಸಭ್ಯರಾಗಿ ಕಾಣಿಸುತ್ತೀರಿ. ದಯಾಶಾಲಿಗಳಾಗಿದ್ದೀರಿ. ವಿವೇಕಿಗಳಾಗಿದ್ದೀರಿ. ತಾವು ದಯಮಾಡಿ ನಮ್ಮ ಮನೆಗೆ ಬರಬೇಕು. ನಮ್ಮ ವ್ಯವಹಾರವನ್ನು ವಿಚಾರಿಸಬೇಕು, ನಮಗೆ ಬುದ್ಧಿವಾದ ಹೇಳಬೇಕು. ನಾವು ಸಿಕ್ಕಿಬಿದ್ದಿರುವ ತೊಡಕನ್ನು ಪರಿಹರಿಸಿ, ನಮ್ಮನ್ನು ಉದ್ಧಾರಮಾಡಬೇಕು" ಎಂದು ಅಂಗಲಾಚಿ ಬೇಡಿಕೊಂಡಳು.

ಮಾಮಣ್ಣ ಕಂಡವರ ಕಷ್ಟಕ್ಕೆ ಕರಗುವವನು. ಏನೂ ಹಿಂದು ಮುಂದು ನೋಡಲಿಲ್ಲ. ಬರುತ್ತೇನೆ. ಅಂದ. ವಿಚಾರಿಸುತ್ತೇನೆ, ಅಂದ. ಬುದ್ಧಿವಾದ ಹೇಳುತ್ತೇನೆ, ಅಂದ.

ಅವಳು ಮನೆಗೆ ಕರೆದುಕೊಂಡು ಹೋದಳು. ಒಳ್ಳೇ ಸುವಾಸನೆ ಕೆದರುತ್ತಿರುವ ಕೊಟಡಿ. ಅಲ್ಲೊಂದು ಮೃದುವಾದ ದೊಡ್ಡ ಸೋಫ. ಕುಳಿತುಕೊಳ್ಳಬೇಕು, ಎಂದು ವಿನಯದಿಂದ ಕೇಳಿಕೊಂಡಳು. ಮಾಮಣ್ಣ ಒಂದು ತುದಿಯಲ್ಲಿ ಕುಳಿತ. ಅವಳು ಇನ್ನೊಂದು ತುದಿಯಲ್ಲಿ ಕುಳಿತಳು. ತನ್ನ ಕಥೆಯನ್ನೆಲ್ಲಾ ಹೇಳಿಕೊಂಡಳು. ಹೇಳುವಾಗ ಕಣ್ಣನ್ನು ನೆಲದ ಮೇಲೆ ಇಟ್ಟದ್ದು ಎತ್ತಲಿಲ್ಲ. ಆಗಾಗ್ಗೆ ಎರಡು ಹನಿ ನೆಲಕ್ಕೆ ತೊಟ್ಟಿಕ್ಕುವುದು. ಒಂದೊಂದು ಸಲ ದೃಷ್ಟಿ ಮೇಲೆತ್ತಿದರೆ, ಮಹಾಬುದ್ಧಿಯಾದ ಮಾಮಣ್ಣನನ್ನು ಆ ದೃಷ್ಟಿ ಹಿಡಿದುಕೊಳ್ಳುವುದು. ಮಾತೋ ಮೊದಲೇ ಮಧುರ. ಮಾತನಾಡುತ್ತಾ ಆಡುತ್ತಾ ಮಧುರತರವಾಯಿತು. ನೋಡುತ್ತಾ ನೋಡುತ್ತಾ ಅದೇ ಮಧುರತಮವಾಯಿತು.

ಮಾಮಣ್ಣನಿಗೆ ಅವಳ ದುಃಖ ಬೇರೆಯಲ್ಲ, ತನ್ನ ದುಃಖ ಬೇರೆಯಲ್ಲ, ಎನ್ನಿಸಿತು. ಮನಸ್ಸು ಹತ್ತಿರವಾಯಿತು. ಕಿವಿ ಹತ್ತಿರ ಕೊಟ್ಟ. ಸೋಫಾದ ಕೊನೆಬಿಟ್ಟು, ಮಧ್ಯದ ಹತ್ತಿರಕ್ಕೆ ಸರಿದ. ಪಾಪ, ಅವಳಿಗೂ ಗೊತ್ತಿಲ್ಲ; ತನ್ನ ದುಃಖವನ್ನು ತೋಡಿಕೊಳ್ಳುವ ಆವೇಶದಲ್ಲಿ, ಮಾತನಾಡುತ್ತ ಆಡುತ್ತ, ಅವಳೂ ತನ್ನ ಅಂಚನ್ನು ಮೀರಿ ಸೋಫದ ನಡುವಿಗೆ ಬಂದಿದ್ದಳು. ಆತ್ಮೀಯನಿಗೆ ಅವಳು ಹೇಳುತ್ತಿದ್ದಳು, ಆತ್ಮೀಯನಾಗಿ ಮಾಮಣ್ಣ ಕೇಳುತ್ತಿದ್ದ. ಕೈಯನ್ನು ಮೃದುವಾಗಿ ಮುಟ್ಟಿ ಧೈರ್ಯ ಹೇಳುತ್ತಿದ್ದ. ಆಗಾಗ್ಗೆ ಬೆನ್ನು ನೇವರಿಸಿ ಸಮಾಧಾನ ಹೇಳುತ್ತಿದ್ದ. ತಾನೇನು ಹೇಳುತ್ತಿದ್ದೇನೆಂದು ಅವಳಿಗೆ ಎಚ್ಚರವಿಲ್ಲ, ತಾನೇನು ಕೇಳುತ್ತಿರುವೆನೆಂದು ಇವನಿಗೆ ಎಚ್ಚರವಿಲ್ಲ.

ಹೀಗೆ ಅವರು ಪರಸ್ಪರ ಹೇಳಿಕೇಳುವುದರಲ್ಲಿ ಮಗ್ನರಾಗಿರಬೇಕಾದರೆ—ಬಂದೇಬಿಟ್ಟನಯ್ಯಾ ಆ ಸೋದರಮಾವ. ಮುಖದ ತುಂಬ ಮೀಸೆ, ಕಣ್ಣಿನ ತುಂಬ ಕೆಂಪು, ಕೈಯ ತುಂಬ ಕೋಲು. ಕೊಂದು ಬಿಡುತ್ತೇನೆ, ಅಂದ. ಮಾಮಣ್ಣನನ್ನು ಮಾತ್ರವಲ್ಲ, ತನ್ನ ಸೋದರ ಸೊಸೆಯನ್ನು ಕೂಡ. ಕಡೆಗೆ ಹೇಳಿದ: ಏನೋ ಅಷ್ಟೋ ಇಷ್ಟೋ ಪರಿಹಾರದ್ರವ್ಯ ಕೊಡುವುದಾದರೆ, ಕ್ಷಮಿಸಿದರೂ ಕ್ಷಮಿಸಿಯೇನು, ಎಂದ. ಮಾಮಣ್ಣ ಕೈಯ ಉಂಗುರ, ಕಿವಿಯ ಕಡಕು, ಕೊರಳ ಚಿನ್ನದೆಳೆ, ಬೆಳ್ಳಿಯ ನಶ್ಯದ ಡಬ್ಬಿ, ಚೀಲದಲ್ಲಿದ್ದ ನೂರಾರು ಹಣ -- ತೆತ್ತು, ಬದುಕಿಕೊಂಡ. ಸದ್ಯಃ ಜೀವವುಳಿಯಿತಲ್ಲಾ, ಎಂದುಕೊಂಡ.

ವಿಷಾದದಿಂದ, ನಾಚಿಕೆಯಿಂದ ಮಾಮಣ್ಣ ಮನೆಗೆ ಬರುವ ವೇಳೆಗೆ, ಯಾರೋ ಸ್ನೇಹಿತರು ಬರೆದು ಕಳಿಸಿದ್ದರು: "ಸ್ನೇಹಿತರು ಬರುತ್ತಾರೆ. ನೀನೂ ಬಾ. ಇಷ್ಟು ತಿಂದು, ಕುಡಿದು, ಸುಖಪಡೋಣ" ಎಂದು.

"ಸರಿ, ಮನೆಯಲ್ಲಿ ಒಬ್ಬನೇ ಇದ್ದರೆ, ಹೀಗಾಗಿಹೋಯಿತಲ್ಲ ಎಂದು ಕೊರಗುವುದೇ ಆಗುತ್ತದೆ. ಅಲ್ಲಿಗಾದರೂ ಹೋಗೋಣ. ಇಷ್ಟು ತಿನ್ನದಿದ್ದರೂ, ಅಷ್ಟು ಕುಡಿಯದಿದ್ದರೂ ಸ್ನೇಹಿತರ ಜೊತೆಯಲ್ಲಿಯಾದರೂ ಇದ್ದು ಬೇಸರ ಕಳೆದುಕೊಳ್ಳೋಣ. ಅವರ ಸಹವಾಸದಲ್ಲಿ ಈ ದಿನದ ಈ ಅವಿವೇಕವನ್ನು ಆದಷ್ಟು ಮರೆಯೋಣ" ಎಂದುಕೊಂಡ.

ಸ್ನೇಹಿತರ ಮನೆಗೆ ಹೋದ. ಅವನ ದುಮ್ಮಾನವನ್ನು ಕಂಡು, "ಇಷ್ಟು ಕುಡಿ" ಎಂದು ಅವರು ಬಲವಂತಮಾಡಿದರು. 'ಮಿತಿ ಅರಿತು ಮದ್ಯ ಸವಿದರೆ, ಅದು ಮೈಗೂ ಮನಸ್ಸಿಗೂ ಉತ್ಸಾಹ ಕೊಡುತ್ತದೆ' ಎಂದು ಮಾಮಣ್ಣಿನಿಗೂ ಗೊತ್ತು. ಸ್ವಲ್ಪ ರುಚಿನೋಡಿದ, ಸ್ವಲ್ಪ ಕುಡಿದ, ಸ್ವಲ್ಪ ಹಾಕಿದ, ಸ್ವಲ್ಪ ತುಂಬಿದ. ತೂಕ ತಪ್ಪಿತು. ಒಂದು ಸಣ್ಣ ಆಟ ಆಡೋಣ, ಅದರಿಂದ ಏನು ದೋಷ, ಎಂದರು ಯಾರೋ. ಮಾಮಣ್ಣಿ ಆಡಿದ. ಮನೆಯಿಂದ ಹೋಗುವಾಗ ಜೇಬಿನಲ್ಲಿ ಎಷ್ಟು ಹಾಕಿಕೊಂಡು ಹೋಗಿದ್ದನೋ ಅಷ್ಟನ್ನೂ ಕಳೆದ. ಸಾಲ ತೆಗೆದ. ಆಡಿದ. ಅದನ್ನೂ ಕಳೆದ. ಕೈಸಾಲದ ಪತ್ರ ಬರೆದ. ಅದನ್ನೂ ಆಡಿ ಕಳೆದ. ಆಡುತ್ತಾ ಆಡುತ್ತಾ ಮಾತಿಗೆ ಮಾತು ಬೆಳೆಯಿತು. ಕೈಗೆ ಕೈ ಹತ್ತಿತು. ಅವನ ಆಪ್ತಸ್ನೇಹಿತನೊಬ್ಬ ಆಟದ ಪೆಟ್ಟಿಗೆಯನ್ನೆತ್ತಿ ಅವನ ತಲೆಗೆ ಬೀರಿದ. ಅದರ ಮೂಲೆ ತಗುಲಿ, ಮಾಮಣ್ಣಿನ ಒಂದು ಕಣ್ಣು ಹೋಯಿತು.

ನಮ್ಮ ಮಹಾಬುದ್ಧಿ ಮನೆಗೆ ಬಂದ. ಬಂದ ಎಂಬುದೇನು?— ಕುಡಿದು ಮೈಮರೆತಿದ್ದವನನ್ನು ಯಾರೋ ತಂದುಹಾಕಿದರು, ಕೈಲಿದ್ದದ್ದು ಕಳೆದು, ಹೊರಟಾಗ ಇದ್ದುದಕ್ಕಿಂತ ಒಂದು ಕಣ್ಣು ಕಡಿಮೆಯಾಗಿ.

ಹಾಗೇ ಮಲಗಿದ. ಅಮಲು ಇಳಿಯಿತು. ಎಚ್ಚರವಾಯಿತು. ಬುದ್ಧಿ ತಿಳಿಯುತ್ತ ಬಂತು. ನೋಡಿದ, ಕೈಲಿ ಕಾಸಿಲ್ಲ. ಸೇವಕನನ್ನು ಕರೆದು. ಹೇಳಿ ಕಳಿಸಿದ: "ಆ ಸಾಹುಕಾರನ ಹತ್ತಿರ ಹೋಗಿ, ನಾನು ಬಡ್ಡಿಗೆ ಕೊಟ್ಟಿರುವುದರಲ್ಲಿ ಇಷ್ಟು ತೆಗೆದುಕೊಂಡು ಬಾ. ಆಟದ ಸಾಲ ವನ್ನು ತೀರಿಸಿಬಿಡೋಣ" ಎಂದು.

ಹೋದ ಸೇವಕ ಹೋದ ಹಾಗೆಯೇ ಬಂದ. "ಆ ಸಾಹುಕಾರ ಇದೇ ಬೆಳಗ್ಗೆ ತಾನೆ ದಿವಾಳಿಯಾದನಂತೆ. ಅವನನ್ನು ನಂಬಿದ್ದ ನೂರಾರು ಸಂಸಾರಗಳು ಮುಳುಗಿದುವಂತೆ." ಎಂದು ಸುದ್ದಿ ತಂದ.

ಮಾಮಣ್ಣಿನಿಗೆ ಹುಚ್ಚು ಹಿಡಿಯುವುದೊಂದು ಬಾಕಿ. ದೊರೆಯ ತನಕ ದೂರು ತೆಗೆದುಕೊಂಡು ಓಡಿದ. "ಮಹಾಸ್ವಾಮಿ. ಆ ದಿವಾಳಿ ಯಿಂದ ನಾನೂ ದಿವಾಳಿಯಾದೆ. ನನ್ನನ್ನು ಬದುಕಿಸಬೇಕು" ಎಂದು ಬೇಡುವುದಕ್ಕೆ.

ಅರಸನ ಆಸ್ಥಾನದ ಹೊರಗಿನ ಹಜಾರದಲ್ಲಿ ಹಲವಾರು ಹೆಂಗಸರು ಕುಳಿತಿದ್ದರು. ಸುಂದರಿಯರು, ಸುಂದರವಾಗಿ ಅಲಂಕಾರಮಾಡಿ ಕೊಂಡಿದ್ದರು.

ಅವರಲ್ಲಿ ಒಬ್ಬಾಕೆ, ಮಾಮಣ್ಣನಿಗೆ ಸ್ವಲ್ಪ ಪರಿಚಯ—ಅವನ ಮುಖ ನೋಡಿ, "ಇದೇನು ಅಪಸ್ಮಾರ!" ಎಂದಳು.

ಇನ್ನೊಬ್ಬಳು, ಇನ್ನೂ ಹೆಚ್ಚು ಪರಿಚಯದವಳು, "ನಮಸ್ಕಾರ, ಮಾಮಣ್ಣನವರೆ. ಬಹಳ ಸಂತೋಷ ತಮ್ಮನ್ನು ಕಂಡದ್ದು. ಅಂದ ಹಾಗೆ, ಮಾಮಣ್ಣನವರೆ, ಏನಾಯಿತು ನಿಮ್ಮ ಇನ್ನೊಂದು ಕಣ್ಣು?" ಎಂದು ಕೇಳಿ, ಅವನು ಉತ್ತರ ಕೊಡುವುದರೊಳಗಾಗಿ, ತನ್ನ ಪಾಡಿಗೆ ತಾನು ಹೊರಟುಹೋದಳು.

ಮಾಮಣ್ಣ ಒಂದು ಮೂಲೆಯಲ್ಲಿ ಮುಖ ಮುಚ್ಚಿಕೊಂಡ. ಅರಸ ರನ್ನು ಕಾಣುವ ಸಮಯಕ್ಕೆ ಕಾಯುತ್ತ ಕುಳಿತ.

ಅರಸರು ಬಂದರು. ಮಾಮಣ್ಣನ ಅಹವಾಲನ್ನು ಕೇಳಿದರು. 'ಅಯ್ಯೋ ಪಾಪ' ಎಂದರು. ಅದಕ್ಕೆ ಸಂಬಂಧಪಟ್ಟ ಅಧಿಕಾರಿಗಳನ್ನು ಕರೆಸಿ, "ಇದೇನು ವಿಚಾರಿಸಿ" ಎಂದರು.

ಆ ಅಧಿಕಾರಿ ಮಾಮಣ್ಣನನ್ನು ಮರ್ಯಾದೆಯಿಂದ ಬೇರೆ ಕಡೆಗೆ ಕರೆದುಕೊಂಡು ಹೋಗಿ, "ಯಾರಯ್ಯಾ ನೀನು, ಒಕ್ಕಣ್ಣ? ನೀನೇನು ವಿದೂಷಕನೇನಯ್ಯ, ಹೀಗೆಲ್ಲಾ ಅರಸರ ಹತ್ತಿರ ಹೋಗಿ ಹರಟುವು ದಕ್ಕೆ? ನನ್ನ ಹತ್ತಿರ ಬರದೆ, ಇದಕ್ಕೆಲ್ಲಾ ಅವರ ಹತ್ತಿರ ಯಾರಯ್ಯಾ ನಿನ್ನನ್ನು ಹೋಗಹೇಳಿದರು? ಆ ಸಾಹುಕಾರ ನನಗೆ ಬಹಳ ಬೇಕಾದ ವನು. ಅವನು ನನ್ನ ಆಶ್ರಿತ. ಅವನಿಗೆ ನಾನು ರಕ್ಷಣೆಕೊಟ್ಟಿದ್ದೇನೆ. ಅರಸರ ಹತ್ತಿರ ಹೋಗಿ, ಅವನ ಮೇಲೆ ದೂರುಹೇಳಿದ್ದೀಯಾ! ಕೇಳು: ಈ ವ್ಯವಹಾರವನ್ನು ಇಲ್ಲೇ ಒಳ್ಳೆಯ ಮಾತಿನಲ್ಲಿ ಇಷ್ಟಕ್ಕೇ ಬಿಟ್ಟೆಯೋ, ಸರಿ; ಇಲ್ಲದೇ ಹೋಯಿತೋ, ನಿನ್ನ ಇರುವ ಒಂದು ಕಣ್ಣಿಗೂ ಶನಿ ವಕ್ರಿಸಿಕೊಳ್ಳುತ್ತದೆ" ಎಂದ.

ಹೀಗೆ ಮಾಮಣ್ಣ, ಅದೇದಿನ ಬೆಳಗ್ಗೆ ಸ್ತ್ರೀಯರ ಸಹವಾಸವನ್ನೂ ಮದ್ಯಪಾನದ ಪ್ರಸಂಗವನ್ನೂ ಜೂಜು ಜಗಳಗಳನ್ನೂ ದೂರವಿರಿಸ

ಬೇಕೆಂದು ನಿಶ್ಚಯಿಸಿದವನು-- ಆ ರಾತ್ರಿಯಾಗುವುದರೊಳಗಾಗಿ ಸುಂದರಿ ಯೊಬ್ಬಳ ಮೋಸಕ್ಕೆ ಸಿಕ್ಕಿಬಿದ್ದು, ಮಿತಿಮೀರಿ ಕುಡಿದು, ಅತಿಯಾಗಿ ಜೂಜಾಡಿ, ಜಗಳದಲ್ಲಿ ಕಣ್ಣು ಕಳೆದುಕೊಂಡು, ಅರಸರ ಹತ್ತಿರ ದೂರಲು ಹೋಗಿ, ಆಸ್ಥಾನದ ಅಧಿಕಾರಿಯಿಂದ ಛೀಮಾರಿಮಾಡಿಸಿಕೊಂಡ.

ಮಾಮಣ್ಣನಿಗೆ ಒಂದು ಕಡೆ ವಿಸ್ಮಯ, ಒಂದು ಕಡೆ ಮನಸ್ತಾಪ, ಒಂದು ಕಡೆ ನಾಚಿಕೆ. ಮನಸ್ಸಿನಲ್ಲಿಯೇ ಸಂಕಟಪಡುತ್ತ ಮನೆಗೆ ಕಾಲೆಳೆದುಕೊಂಡು ಬಂದ.

ಮನೆಗೆ ಬಂದರೆ, ಸಾಲಗಾರರು ಆಗಲೇ ಬಂದು, ನ್ಯಾಯಾಸ್ಥಾನ ದವರ ಸಹಾಯದಿಂದ ಅವನ ಮನೆಯ ಸಾಮಾನುಗಳನ್ನು ಹರಾಜು ಹಾಕಿಸುತ್ತಿದ್ದರು. ಮಾಮಣ್ಣನಿಗೆ ಮೂರ್ಛೆ ಬೀಳುವ ಹಾಗಾಯಿತು. ಅಲ್ಲೇ ಮನೆಯ ಮುಂದಿನ ಮರಗಳಲ್ಲಿ ಒಂದನ್ನು ಒರಗಿಕೊಂಡು ಕುಳಿತ.

ಅಲ್ಲಿ, ಆ ಬೆಳಗ್ಗೆ ತಾನೆ ತಾನು ಕಂಡ ಆ ಹುಡುಗಿ ತನ್ನ 'ಸೋದರ ಮಾವ'ನ ಕೂಡ ಕಿಲಕಿಲನೆ ನಗುತ್ತ ಹೋಗುತ್ತಿದ್ದಾಳೆ. ಮಾಮಣ್ಣನ ಮುಖದ ಮೇಲೆ ಒಂದು ಕಣ್ಣಿಗೆ ಕಟ್ಟಿದ್ದ ಬಟ್ಟೆಯನ್ನು ಕಂಡು, ಅವಳು ಪಕಪಕಾ ಎಂದು ನಕ್ಕಳು.

ರಾತ್ರಿಯಾಯಿತು. ಮಲಗುವುದಕ್ಕೆ ಮನೆಯಿಲ್ಲ. ಅಲ್ಲೇ ಗೋಡೆಯ ಅಂಚಿನಲ್ಲಿ ಬಿದ್ದಿದ್ದ ಒಂದಿಷ್ಟು ಹುಲ್ಲಿನ ಮೇಲೆ ಮಾಮಣ್ಣ ಹಾಗೇ ಮುದುರಿಕೊಂಡ. ಚಳಿಯೋ ಚಳಿ. ಗಡಗಡನೆ ನಡುಕ ಬಂತು. ಹಾಗೇ ನಿದ್ರೆ ಬಂತು.

* * * *

ಆ ನಿದ್ರೆಯಲ್ಲಿ ಒಂದು ಕನಸು, ಅವನಿಗೆ—ಯಾರೋ ದೇವದೂತ ಪ್ರತ್ಯಕ್ಷವಾದ ಹಾಗೆ.

ಆ ದೇವದೂತನಿಗೆ ಬೆಳಕಿನ ಮೈ, ಫಳಫಳ ಹೊಳೆಯುತ್ತಿತ್ತು. ಅವನಿಗೆ ಪರಮ ಸುಂದರವಾದ ಆರು ರೆಕ್ಕೆಗಳು. ಕಾಲಿಲ್ಲ, ತಲೆಯಿಲ್ಲ, ಬಾಲವಿಲ್ಲ. ಅಂತಹ ಆಕೃತಿಯನ್ನು ಅವನು ಅದುವರೆಗೆ ಕಂಡಿರಲಿಲ್ಲ.

"ನೀನು ಯಾರು?" ಎಂದು ಕೇಳಿದ, ಮಾಮಣ್ಣ.

"ನಾನು ನಿನ್ನ ಭಾಗ್ಯದೇವತೆ" ಎಂದಿತು ಅದು,

"ನನ್ನ ಈ ಹೋದ ಕಣ್ಣನ್ನು ಕೊಡು. ನನ್ನ ಆರೋಗ್ಯ, ನನ್ನ ಮನೆ, ನನ್ನ ಐಶ್ವರ್ಯ, ನನ್ನ ಮಾನ, ನನ್ನ ವಿವೇಕ—ನಷ್ಟವಾಗಿರುವ ಇವೆಲ್ಲವನ್ನೂ ನನಗೆ ಮತ್ತೆ ಕೊಡು" ಎಂದ, ಮಾಮಣ್ಣ. ಆ ಬೆಳಗಿನಿಂದ ರಾತ್ರಿಯ ವರೆಗೆ ತನಗೆ ಸಂಭವಿಸಿದ್ದನ್ನೆಲ್ಲಾ ಹೇಳಿಕೊಂಡು ಗೋಳಾಡಿದ.

"ನಾವು ವಾಸವಾಗಿರುವ ಲೋಕದಲ್ಲಿ ಇಂಥ ಪ್ರಕರಣಗಳು ಸಂಭವಿಸುವುದೇ ಇಲ್ಲ" ಎಂದಿತು, ಆ ದೇವಚೇತನ.

"ನೀವು ವಾಸಮಾಡುವುದು ಯಾವ ಲೋಕ?"

"ನಮ್ಮ ಲೋಕ ಸೂರ್ಯನಿಂದ ಆಚೆ ಐದುನೂರು ಕೋಟ್ಯಂತರ ಯೋಜನ ದೂರದಲ್ಲಿ. ಅದೋ, ಅಲ್ಲಿ ನಕ್ಷತ್ರದಂತೆ ಕಾಣುವುದೇ—ಅಲ್ಲಿ!"

"ಬಹು ಮನೋಹರವಾದ ಲೋಕ! ಏನಪ್ಪ? ಅರಿಯದವರನ್ನು ಮೋಸಗೊಳಿಸಿ ಮುಳುಗಿಸುವ ಮಾಯಾಂಗನೆಯರು ಅಲ್ಲಿಲ್ಲವಷ್ಟೆ? ಸ್ನೇಹಿತನ ಹಣವನ್ನೆಲ್ಲಾ ದೋಚಿಕೊಂಡು, ಅವನ ಕಣ್ಣನ್ನು ತಿವಿದು ಹಾಕುವ ಮಿತ್ರರೂಪದ ಶತ್ರುಗಳು ಅಲ್ಲಿಲ್ಲ ತಾನೆ? ನಂಬಿ ದುಡ್ಡು ಕೊಟ್ಟರೆ, ಕೊಟ್ಟವನು ಹಂಬಲಿಸುವ ಹಾಗೆ ಮಾಡುವ ದಿವಾಳಿ ಸಾಹುಕಾರರು ಅಲ್ಲಿಲ್ಲ ಅಲ್ಲವೆ? ನ್ಯಾಯ ಬೇಕೆಂದು ಮೊರೆಯಿಟ್ಟರೆ ನಾಯಿ ಛೂಬಿಡುವೆನೆಂದು ಹೆದರಿಸುವ ರಾಜಾಸ್ಥಾನದ ಅಧಿಕಾರಿಗಳು ಅಲ್ಲಿಲ್ಲವಷ್ಟೆ?" ಎಂದು ಗೋಳಾಡಿದ, ಮಾಮಣ್ಣ.

ಅದಕ್ಕೆ ಆ ದೇವದೂತ ಹೇಳಿದ: "ಅಂತಹುದೇನೂ ಅಲ್ಲಿಲ್ಲ. ನಮ್ಮನ್ನು ಹೆಂಗಸರು ಮೋಸಗೊಳಿಸುವಂತಿಲ್ಲ; ಏಕೆಂದರೆ, ನಮ್ಮಲ್ಲಿ ಹೆಂಗಸರೇ ಇಲ್ಲ. ಕುಡಿತದಲ್ಲಿ ನಾವು ಮಿತಿಮೀರುವ ಹಾಗೆಯೂ ಇಲ್ಲ; ಕಾರಣ, ನಾವು ಕುಡಿಯಬೇಕಾದ ತಿನ್ನಬೇಕಾದ ಅಗತ್ಯವೇ ಇಲ್ಲ. ನಮ್ಮಲ್ಲಿ ಸಾಹುಕಾರರೂ ಇಲ್ಲ, ದಿವಾಳಿಗಳೂ ಇಲ್ಲ; ಏಕೆಂದರೆ, ಚಿನ್ನ ಬೆಳ್ಳಿಗಳನ್ನು ನಾವು ಅಲ್ಲಿ ಕಂಡು ಅರಿಯೆವು. ನಮ್ಮ ಕಣ್ಣನ್ನು ಯಾರೂ ತಿವಿದು ಹಾಕುವಂತಿಲ್ಲ; ಏಕೆಂದರೆ, ನಮಗೆ ನಿಮ್ಮಂತೆ ದೇಹಗಳಿಲ್ಲ. ಮತ್ತೆ, ನ್ಯಾಯಕ್ಕಾಗಿ ನಾವು ಯಾರಲ್ಲಿಯೂ ಮೊರೆಯಿಡಬೇಕಾದುದಿಲ್ಲ; ನಮ್ಮ ಲೋಕದಲ್ಲಿ ನಾವೆಲ್ಲ ಸರಿಸಮಾನರು."

ಮಾಮಣ್ಣ ಆಶ್ಚರ್ಯದಿಂದ ಕೇಳಿದ: "ಸುಂದರಿಯರು ಯಾರೂ ಇಲ್ಲದಿದ್ದರೆ, ತಿನ್ನುವುದೂ ಕುಡಿಯುವುದೂ ಇಲ್ಲದಿದ್ದರೆ, ನೀವು ಹೊತ್ತು ಕಳೆಯುವುದು ಹೇಗೆ?

"ಹೊತ್ತು ಕಳೆಯುವುದು ಹೇಗೆಂದರೆ— ನಮ್ಮ ವಶಕ್ಕೆ ಒಪ್ಪಿಸಿರುವ ಲೋಕಗಳನ್ನು ಕಣ್ಣಿಟ್ಟು ನೋಡುವುದರಿಂದ. ಈಗ ಇಲ್ಲಿ ನಿನಗೆ ಸಮಾಧಾನ ಹೇಳಲು ಬಂದಿದ್ದೇನೆ."

"ಅಯ್ಯೋ! ಈಗ ಬರುವ ಬದಲು ನೆನ್ನೆ ರಾತ್ರಿ ಏಕೆ ಬರಲಿಲ್ಲ? ಬಂದು, ನನ್ನ ಈ ಅವಿವೇಕವನ್ನು ತಡೆಯಲಿಲ್ಲವೇಕೆ?"

"ನಾನು ನೆನ್ನೆ ನಿನ್ನ ಅಣ್ಣನ ಹತ್ತಿರ ಹೋಗಿದ್ದೆ. ಅವನು ನಿನಗಿಂತ ಹೆಚ್ಚಿನ ಸಂಕಟದಲ್ಲಿದ್ದಾನೆ. ಅವನು ಏನೋ ಸಣ್ಣ ಅವಿವೇಕ ಮಾಡಿದನೆಂದು, ಅವನ ಅರಸನು ಅವನ ಎರಡು ಕಣ್ಣುಗಳನ್ನೂ ಕೀಳಿಸಿದ್ದಾನೆ. ಈಗ ಅವನು ನೆಲಮಾಳಿಗೆಯಲ್ಲಿ ಸೆರೆ ಬಿದ್ದಿದ್ದಾನೆ. ಕಬ್ಬಿಣದ ಸಂಕೋಲೆಯಿಂದ ಅವನ ಕೈಕಾಲುಗಳನ್ನು ಬಿಗಿದಿದ್ದಾರೆ."

ಮಾಮಣ್ಣ ಕಹಿನಗು ನಕ್ಕು, "ಮನೆತನಕ್ಕೆ ಒಂದು ಭಾಗ್ಯದೇವತೆ ಇದ್ದೂ ಉದ್ಧಾರವಾಯಿತು! ಅಣ್ಣತಮ್ಮಂದಿರಲ್ಲಿ ಒಬ್ಬನಿಗೆ ಒಂದು ಕಣ್ಣು ಹೋಯಿತು, ಇನ್ನೊಬ್ಬನಿಗೆ ಎರಡೂ ಹೋಯಿತು! ಒಬ್ಬ ಬೀದಿಯಲ್ಲಿ ಹುಲ್ಲಿನ ಮೇಲೆ ಬಿದ್ದಿದ್ದಾನೆ, ಇನ್ನೊಬ್ಬ ನೆಲಮಾಳಿಗೆಯಲ್ಲಿ ಕೊಳೆಯುತ್ತಿದ್ದಾನೆ!" ಎಂದ.

"ನಿನ್ನ ಗತಿ ಉತ್ತಮಗೊಳ್ಳುತ್ತದೆ. ನೀನೇನೂ ಚಿಂತೆಪಡಬೇಡ. ಹೋದ ಕಣ್ಣು ಹಿಂದಕ್ಕೆ ಬರುವುದು ಸಾಧ್ಯವಿಲ್ಲ, ನಿಜ. ಆದರೂ ನೀನು ತಕ್ಕಮಟ್ಟಿಗೆ ಸುಖವಾಗಿ ಇರುತ್ತೀಯೆ. ಎಂದರೆ, ಒಂದೇ: ಪುನಃ ಎಂದೆಂದಿಗೂ ಕೇವಲ ಬುದ್ಧಿವಂತನಾಗಿರಬೇಕೆಂಬ, ಪರಿಪೂರ್ಣ ವಿವೇಕವುಳ್ಳವನಾಗಿರಬೇಕೆಂಬ ಈ ಹುಚ್ಚುಬಯಕೆಯನ್ನು ಬಯಸಬೇಡ. ಅಷ್ಟೆ" ಎಂದ, ಆ ದೇವದೂತ.

"ಹಾಗಾದರೆ, ಅಂಥ ಸ್ಥಿತಿಯನ್ನು ಸಂಪಾದಿಸಲು ಸಾಧ್ಯವಿಲ್ಲವೆ?" ಎಂದ ಮಾಮಣ್ಣ, ನಿಟ್ಟುಸಿರುಬಿಡುತ್ತ.

"ಕೇವಲ ಜಾಣನಾಗಿರುವುದು, ಸಂಪೂರ್ಣ ಶಕ್ತಿವಂತನಾಗಿರು

ವುದು, ಪರಿಪೂರ್ಣ ಸಾಮರ್ಥ್ಯ ಹೊಂದಿರುವುದು, ಅಥವಾ ದುಃಖವೇ ಸೋಕದ ಸುಖ ಹೊಂದಿರುವುದು ಎಷ್ಟು ಅಸಾಧ್ಯವೋ ಇದೂ ಅಷ್ಟೇ ಅಸಾಧ್ಯ. ಸಂಪೂರ್ಣವಾದ ವಿವೇಕ—ಇತ್ಯಾದಿ ನಮಗೂ ಸಾಧ್ಯವಿಲ್ಲ. ನಿಜ, ಇಂತಹ ಸ್ಥಿತಿ ದೊರಕುವ ಲೋಕವೂ ಉಂಟು; ಆದರೆ ಆಕಾಶದಲ್ಲಿ ಕೆದರಿ ಚೆಲ್ಲಿಹೋಗಿರುವ ಈ ನೂರು ಸಾವಿರ ಲಕ್ಷ ಕೋಟ್ಯಂತರ ಲೋಕಗಳಲ್ಲಿ ಎಲ್ಲವೂ ಕ್ರಮಶಃ ಸಾಧ್ಯವಾಗಬೇಕೇ ಹೊರತು ಬೇರೆಯಿಲ್ಲ. ಮೊದಲನೆಯದಕ್ಕಿಂತ ಎರಡನೆಯ ಲೋಕದಲ್ಲಿ ಬುದ್ಧಿ, ವಿವೇಕ, ಸುಖ ಕಡಮೆ; ಮೂರನೆಯದರಲ್ಲಿ ಎರಡನೆಯದಕ್ಕಿಂತ ಇನ್ನು ಕೊಂಚ ಕಡಮೆ; ಹೀಗೆಯೇ ಹೋಗುತ್ತ ಹೋಗುತ್ತ, ಕಡೆಗೆ ಒಂದು ಲೋಕದಲ್ಲಿ ಎಲ್ಲರೂ ಸಂಪೂರ್ಣ ಬುದ್ಧಿಹೀನರೇ! ಎಲ್ಲರೂ ಕೇವಲ ಅವಿವೇಕಿಗಳೇ!" ಎಂದ, ದೇವದೂತ.

"ನೀನು ಹೇಳುವುದು ನೋಡಿದರೆ, ಈಗ ತಾನೇ ನೀನು ಅಪ್ಪಣೆ ಕೊಡಿಸಿದ ಈ ಕಡೆಯ ಲೋಕವೆಂಬುದು ಈ ನಮ್ಮ ಭೂಲೋಕವೇ ಹೌದೆಂದು ತೋರುತ್ತದೆ" ಎಂದು ಮಾಮಣ್ಣ ತಲೆಯಾಡಿಸಿದ.

"ಅಲ್ಲ, ಅಲ್ಲ. ಅದೇ ಇದು ಅಲ್ಲದೆ ಹೋದರೂ, ಆ ಲೋಕಕ್ಕಿಂತ ಇದು ಅಷ್ಟೇನೂ ದೂರವಿಲ್ಲ. ಆದರೂ ಅದರದರ ಸ್ಥಾನ ಅದದಕ್ಕೆ ಉಂಟು."

"ಹಾಗಾದರೆ, ಕೆಲವರು ಕವಿಗಳೂ ಕೆಲವರು ತತ್ತ್ವಜ್ಞಾನಿಗಳೂ '**ಇರುವುದೆಲ್ಲ ಒಳ್ಳೆಯದಕ್ಕಾಗಿಯೇ**' ಎಂದು ಹೇಳುವರಲ್ಲಾ; ಅದು ತಪ್ಪು ಅಲ್ಲವೆ?"

ಅದಕ್ಕೆ ಆ ಮೇಲುಲೋಕದಿಂದ ಬಂದ ತತ್ತ್ವಜ್ಞಾನಿ ಹೇಳಿದ: "ಅಲ್ಲ. ಸಮಸ್ತವಾದ ವಿಶ್ವದ ಜೋಡಣೆಯನ್ನು ಗಮನಿಸಿ ಹೇಳುವಾಗ, ಅವರು ಆಡುವ ಆ ಮಾತು ಸಂಪೂರ್ಣವಾಗಿ ಸರಿ."

ಮಾಮಣ್ಣ ಮಾತ್ರ, ಅದನ್ನು ಒಪ್ಪದೆ, "ಉಹುಂ. ನಾನು ಪುನಃ ನನ್ನ ಎರಡೂ ಕಣ್ಣುಗಳ ಮೂಲಕ ಕಾಣುವ ವರೆಗೆ ಆ ಮಾತಿನಲ್ಲಿ ನನಗೆ ನಂಬಿಕೆ ಉಂಟಾಗುವುದಿಲ್ಲ" ಎಂದ.

# ಕುಷಿ-ಸಂಕಟ

ಅಥವಾ

## ಮಹತ್ತಾದ ಕಲ್ಯಾಣಕ್ಕಾಗಿ ಅಲ್ಪವಾದ ಅಪರಾಧ

---

ಮಹತ್ತಾದ ಕಲ್ಯಾಣದ ಸಾಧನೆಗಾಗಿಯಾದರೂ ಅಲ್ಪವಾದ ಅಪರಾಧವನ್ನು ಮಾಡುವುದು ತಕ್ಕದ್ದಲ್ಲ ಎಂಬ ಸೂತ್ರ ತಪ್ಪುತಿಳಿವಳಿಕೆಯಿಂದ ಹುಟ್ಟಿದ್ದು. ಇದಕ್ಕೆ ಉದಾಹರಣೆಯಾಗಿ, ಆಫ್ರಿಕದಲ್ಲಿ ನಡೆದದ್ದು ಒಂದು ಕತೆಯಿದೆ.

ಹಿಪ್ಪೋ ಎಂಬುದು ನಗರ. ಅಲ್ಲೊಬ್ಬ ಮಠಾಧಿಪತಿ, ಸ್ವಾಮಿ. ಅನೇಕ ಬ್ರಹ್ಮಚಾರಿಗಳಿಗೆ ಅವನು ಕುಲಪತಿ. ಸುತ್ತಮುತ್ತಿನ ಕನ್ಯೆಯರು ತಮ್ಮ ಮನಸ್ಸಿನ ಹೊರೆಯನ್ನು ಅವನ ಹತ್ತಿರ ಬಂದು ಹೇಳಿಕೊಳ್ಳುವುದು ರೂಢಿ. ಅವನ ಮೇಲೆ ಆಗಾಗ್ಗೆ ದೇವರು ಬರುತ್ತಿದ್ದರಂತೆ. ಅಂಥ ಹೊತ್ತಿನಲ್ಲಿ ಅವನು ಆಡಿದ ಭವಿಷ್ಯ ನಿಜವಾಗುತ್ತಿತ್ತಂತೆ.

ಒಂದು ದಿನ ಕುಷಿಸಂಕಟ ಎಂಬ ಕನ್ಯೆ ಅವನ ಬಳಿಗೆ ಬಂದಳಂತೆ.

ಆ ಪ್ರಾಂತದಲ್ಲೆಲ್ಲ ಅವಳೇ ಪರಮ ಸುಂದರಿಯೆಂದು ಪ್ರಖ್ಯಾತಿ. ಅವಳ ತಾಯಿ ತಂದೆ ಇಬ್ಬರೂ ತುಂಬ ಆಚಾರವಂತರು. ತುಂಬಾ ನಿಷ್ಠಾಪರರು. ಮಗಳನ್ನು ಒಳ್ಳೇ ಶೀಲದ ಸಭ್ಯತೆಯ ದಾರಿಯಲ್ಲಿ ಕಟ್ಟುನಿಟ್ಟಾಗಿ ನಡೆಸಿ ಬೆಳೆಸಿದ್ದರು. ಊರಿನ ಯುವಕರೆಲ್ಲಾ ಅವಳ ಕಡೆ ಕಣ್ಣು ತಿರುವಿ ಅವಳನ್ನು ಆಸೆಪಡುತ್ತಿದ್ದರೂ ಅವಳು ಮಾತ್ರ ಯಾವನನ್ನೂ ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ.

ಅವಳನ್ನು ಅವಳ ತಾಯಿ ತಂದೆ ಅದೇ ಊರಿನ ಕಾಪಟ ಎಂಬ ವರನಿಗೆ ಕೊಡುವುದೆಂದು ನಿಶ್ಚಿತಾರ್ಥಮಾಡಿದ್ದರು. ಕಾಪಟ ಅದೇ ಊರಿನ ಕೆಳನ್ಯಾಯಾಲಯದಲ್ಲಿ ಒಬ್ಬ ಅಧಿಕಾರಿ. ಮುದುಕ, ಮುಂಗೋಪಿ. ಕಿಡುಕ. ಹಾಸ್ಯವೆಂಬುದೇ ಅವನ ಹತ್ತಿರ ಸುಳಿಯದು.

ನಗುತ್ತಾ ಮಾತನಾಡಿದನೆಂದರೆ, ಅದು ತಿರಸ್ಕಾರದ ನಗು. ಅವರಿವರನ್ನು ನಿಂದಿಸಿ ದೂಷಿಸುವುದೆಂದರೆ ಅವನಿಗೆ ಪರಮಪ್ರೀತಿ. ಮತ್ಸರ ಎಂಬುದಕ್ಕೆ ಅವನ ಮನಸ್ಸೇ ತವರುಮನೆ. ತನಗೆ ನಿಶ್ಚಿತವಾಗಿದ್ದ ಹೆಣ್ಣಿನ ಬಳಿ ಗಂಡುಪಿಳ್ಳೆ ಸುಮ್ಮನೆ ಸುಳಿದರೂ ಸಾಕು, ಭೂಮಿ ನರಕ ಒಂದು ಮಾಡಿಬಿಡುತ್ತಿದ್ದ.

ಕುಷಿಸಂಕಟ ಅವನನ್ನು ಪ್ರೀತಿಸಲು ತನ್ನ ಕೈಲಾದ್ದನ್ನೆಲ್ಲ ಮಾಡುತ್ತಿದ್ದಳು. ಮುಂದೆ ತನಗೆ ಅವನೇ ಗಂಡ ಎಂದು ಆತ್ಮನಾ ನಂಬಿ ನಡೆಯುತ್ತಿದ್ದಳು. ಆದರೆ ಅವನನ್ನು ಮೆಚ್ಚಿಸುವುದು ಯಾರಿಗೂ ಸಾಧ್ಯವಿರಲಿಲ್ಲ.

ಅದಕ್ಕೋಸ್ಕರ ಆ ಸ್ವಾಮಿಯ ಬಳಿಗೆ ಬಂದಳು—ತನ್ನ ಸಂಸಾರ ಜೀವನ ಸುಖವಾಗಿರುವುದೇ. ಎಂದು ಕೇಳುವುದಕ್ಕೆ.

ಆ ಸ್ವಾಮಿ ಹೇಳಿದ, ಭವಿಷ್ಯವಾದಿಯ ಹಾಗೆ :

"ಮಗಳೆ, ನಿನ್ನ ಪಾತಿವ್ರತ್ಯದಿಂದ ನಿನಗೆ ತುಂಬ ಅಸುಖವಾಗುತ್ತದೆ. ಆದರೆ, ಮೂರುಬಾರಿ ನಿನ್ನ ಪತಿವ್ರತಾಧರ್ಮ ತಪ್ಪಿ, ಅದರಿಂದಲೇ ನೀನು ಈ ಪ್ರಾಂತಕ್ಕೆ ನಾಡದೇವತೆಯಾಗಿ ಭಾವಿಸಲ್ಪಡುತ್ತೀಯೆ."

ಆ ಭವಿಷ್ಯವನ್ನು ಕೇಳಿ, ಪಾಪ, ಆ ಏನೂ ಅರಿಯದ ಹುಡುಗಿ ಆಶ್ಚರ್ಯಪಟ್ಟಳು, ಅವಳಿಗೆ ದಿಗ್ಭ್ರಮೆಯಾಯಿತು. ಕಣ್ಣೀರು ಸುರಿಸಿದಳು; ಅದು ಹೇಗೆ, ವಿವರಿಸಿ, ಎಂದು ಬೇಡಿಕೊಂಡಳು. ಸ್ವಾಮಿ ಹೇಳಿದ ಮಾತುಗಳಲ್ಲಿ ಏನೋ ರಹಸ್ಯಾರ್ಥ ಅಡಗಿರಬೇಕು, ಎಂದುಕೊಂಡಳು. ಅದಕ್ಕೆ ಉತ್ತರವಾಗಿ ಆ ಸ್ವಾಮಿ ಹೇಳಿದ್ದು ಇಷ್ಟೆ : "ಮೂರು ಬಾರಿ ಪತಿವ್ರತಾಧರ್ಮ ತಪ್ಪುವುದೆಂದರೆ—ಒಬ್ಬನೊಡನೆಯೇ ಮೂರು ಬಾರಿಯಲ್ಲ, ಮೂವರೊಂದಿಗೆ ಒಂದೊಂದು ಬಾರಿ."

ಕುಷಿಸಂಕಟ ಗೋಳೋ ಎಂದು ಅತ್ತಳು; ಸ್ವಾಮಿಯನ್ನು ನಿಷ್ಠುರವಾಗಿ ಟೀಕಿಸಿದಳು. "ಸತ್ತರೂ ಸರಿಯೆ, ನಾನು ನಾಡದೇವತೆಯಾಗುವುದಿಲ್ಲ" ಎಂದು ಆಣೆಯಿಟ್ಟುಕೊಂಡಳು.

ಆದರೂ, ಅವಳು ಬೇಡವೆಂದರೂ, ನಾಡದೇವತೆ ಆಗಿಯೇ ಆದಳು. ಮುಂದೆ ನೀವೇ ನೋಡುತ್ತೀರಿ.

ಸ್ವಲ್ಪಕಾಲದಲ್ಲಿಯೇ ಅವಳಿಗೂ ಕಾಘಟನಿಗೂ ಮದುವೆಯಾಯಿತು. ಬಹಳ ಅದ್ಧೂರಿಯಿಂದ ನಡೆಯಿತು. ಮದುವೆಗೆ ಬಂದಿದ್ದ ಅತಿಥಿಗಳ ಹಾಸ್ಯಗಳನ್ನೂ ಕೊಂಕುಮಾತುಗಳನ್ನೂ ಎರಡೆರಡು ಅರ್ಥದ ಚುಚ್ಚುಗಳನ್ನೂ ಕೇಳಲು ನಾಚಿಕೆಯಾದರೂ ಕೇಳಿ ಸಹಿಸಿಕೊಂಡಳು. ಮದುವೆಯ ದಿವಸ ಅವರ ಜಾತಿಪದ್ಧತಿಯ ಪ್ರಕಾರ, ಯುವಕರು ಯಾರು ಯಾರು ಕರೆದರೆ, ಅವರ ಜೊತೆಗೆ ನರ್ತನಮಾಡಿದಳು. ರಾತ್ರಿ ತಾವು ಮಲಗುವ ಮನೆಗೆ ಹೋಗುವವರೆಗೂ ಅವಳ ಗಂಡ ಹುಬ್ಬುಗಂಟಿಕ್ಕಿದ್ದನ್ನು ಮರೆತಾದರೂ ಬಿಚ್ಚಲಿಲ್ಲ.

ಮನಸ್ಸಿಗೆ ಜುಗುಪ್ಸೆಯಾದರೂ, ಕಾಘಟನೊಂದಿಗೆ ಒಂದೇ ಹಾಸಿಗೆಯಲ್ಲಿ ಆ ರಾತ್ರಿ ಕಳೆದಳು. ಹಾಗೂ ಹೀಗೂ ನಿದ್ರೆಮಾಡಿ, ಬೆಳಗ್ಗೆ ಎಚ್ಚರವಾದಾಗ ಅವಳ ಮನಸ್ಸಿನಲ್ಲಿ ಏನೋ ದುಗುಡ ತುಂಬಿಕೊಂಡಿತ್ತು. ಅವಳು ಅಷ್ಟಾಗಿ ತನ್ನ ಗಂಡನನ್ನು ಕುರಿತು ಚಿಂತಿಸುತ್ತಿರಲಿಲ್ಲ. ಅವಳಿಗೇ ಗೊತ್ತಿಲ್ಲದ ಹಾಗೆ, ದಬಲಾಡ ಎಂಬವನು ಅವಳ ತಲೆಗೆ ಬಂದು ತುಂಬಿಕೊಂಡಿದ್ದ. ಆ ಯುವಕ ಸಾಕ್ಷಾತ್ ಮನ್ಮಥನೇ ಮಾಡಿ ಕಳಿಸಿದ ಬೊಂಬೆಯ ಹಾಗಿದ್ದ. ಮೋಹಕವಾದ ಮಾತು ಗೀತು, ಸ್ವಲ್ಪ ತುಂಟತನ, ಹುಡುಗಾಟ. ಸ್ವಲ್ಪ ಧೃಷ್ಟತನ ಅತಿಯಾಯಿತು ಎನ್ನಿಸಿದರೂ, ಹೆಂಗಸರಿಗೆ ಅವನನ್ನು ಕಂಡರೆ ಇಷ್ಟ. ಒಪ್ರೋ ನಗರಕ್ಕೆ ಅವನು ಕರೆದವರ ಕೈಯ ಕೃಷ್ಣ. ಅವನಿಂದ ಅನೇಕ ಹೆಂಗಸರ ಸ್ನೇಹ ಮಾತ್ಸರ್ಯಕ್ಕೆ ತಿರುಗಿತ್ತು. ಅನೇಕರು ಗಂಡಹೆಂಡಿರಿಗೆ ಮನಸ್ತಾಪ. ಅವನಿಗೆ ಆ ಊರಿನ ಇತರರೆಲ್ಲಾ ಆಟದ ವಸ್ತುಗಳಾದರೂ ಕುಷಿಸಂಕಟಳ ಮೇಲೆ ಅವನಿಗೆ ನಿಜವಾಗಿಯೂ ಪ್ರೇಮ. ಅದಕ್ಕೆ ಕಾರಣ: ಅವಳು ಇತರ ಹೆಣ್ಣುಗಳಂತೆ ಸುಲಭವಾಗಿ ವಶವಾಗುವುದಿಲ್ಲ, ಎಂಬುದೇ.

ಅವನು ಮೊದಲು, ಬುದ್ಧಿವಂತನ ಹಾಗೆ, ಅವಳ ಗಂಡನ ಸ್ನೇಹವನ್ನು ಸಂಪಾದಿಸಲು ಪ್ರಯತ್ನಿಸಿದ. ಸಾವಿರ ರೀತಿಯಲ್ಲಿ ಅವನನ್ನು ಹೊಗಳಿದ, ಹಾಡಿದ: ಅವನ ಸೌಂದರ್ಯ, ಅವನ ಪಾಂಡಿತ್ಯ, ಅವನ ಜಾಣತನ, ಅವನ ಸೌಜನ್ಯ— ಒಂದಲ್ಲ, ಎರಡಲ್ಲ. ಅವನೊಡನೆ ಆಟವಾಡಿದ; ಬೇಕುಬೇಕೆಂದೇ ಅವನಿಗೆ ಹಣ ಸೋತ. ಆಗಾಗ ಒಂದೊಂದು

ರಹಸ್ಯವನ್ನು ಅವನಿಗೆ ಮಾತ್ರ ಹೇಳುವಂತೆ ನಟಿಸಿದ. ಕುಷಿಸಂಕಟ ಮಾತ್ರ ಮನೆಗೆ ಬಂದ ಅತಿಥಿಗೆ ಎಷ್ಟು ಆದರ ತೋರಿಸಬೇಕೋ ಅಷ್ಟೇ ತೋರಿಸುವೆನೆಂದುಕೊಂಡರೂ, ಅವಳಿಗೇ ಗೊತ್ತಾಗದ ಹಾಗೆ ಆ ಆದರ ದಲ್ಲಿ ಪ್ರಣಯ ವ್ಯಕ್ತವಾಗುತ್ತಿತ್ತು. ಇದು ಅವಳಿಗೆ ಗೋಚರವಾಗ ದಿದ್ದರೂ, ಅವಳ ಗಂಡನಿಗೆ ಆಗದಿರಲಿಲ್ಲ. ಅವನಿಗೆ ತನ್ನ ಬಗ್ಗೆ ಏನೇ ದುರಭಿಮಾನ ತುಂಬಿ ತುಳುಕುತ್ತಿದ್ದರೂ, ರಬಲಾಡ ಬರುವುದು ಅವಳಿ ಗಾಗಿಯಲ್ಲದೆ ತನಗಾಗಿ ಅಲ್ಲ ಎಂಬುದನ್ನು ಕಂಡುಕೊಳ್ಳದಿರಲಿಲ್ಲ. ಅದ ರಿಂದ, ಯಾವುದೋ ಸಣ್ಣ ನೆಪದ ಮೇಲೆ ಅವನ ಹತ್ತಿರ ಜಗಳ ತೆಗೆದು, ಮತ್ತೊಂದು ಸಲ ಈ ಮನೆಯ ಕಡೆ ಮುಖವಿಡಬೇಡ, ಎಂದು ಅವನನ್ನು ಅಟ್ಟಬಿಟ್ಟ.

ಕುಷಿಸಂಕಟಳಿಗೆ ತುಂಬ ವ್ಯಸನವಾಯಿತು. ಆದರೆ ಅದನ್ನು ತೋರಿಸಿಕೊಳ್ಳುವ ಧೈರ್ಯವಿಲ್ಲ. ಇತ್ತ ರಬಲಾಡನಿಗಾದರೋ, ಅಡ್ಡಿ ಗಳು ಹೆಚ್ಚಾದಷ್ಟೂ ಅವನ ಆಸೆ ಹೆಚ್ಚಾಯಿತು; ಅವಳನ್ನು ಕಾಣುವು ದಕ್ಕೆ ಅವಕಾಶ ಹುಡುಕುವುದು ಹೆಚ್ಚಾಯಿತು. ಒಮ್ಮೆ ಸಂನ್ಯಾಸಿಯ ಹಾಗೆ ವೇಷಹಾಕಿಕೊಂಡ, ಇನ್ನೊಮ್ಮೆ ಹಳೇಬಟ್ಟೆ ಮಾರುವವನ ಹಾಗೆ ಬಂದ, ಮತ್ತೊಮ್ಮೆ ದೊಂಬರಾಟ ಆಡುತ್ತ ಬಂದ. ಹೀಗೆ ಏನೇ ಮಾಡಿದರೂ, ತನ್ನ ಪ್ರೇಯಸಿಯನ್ನು ವಶಪಡಿಸಿಕೊಳ್ಳುವುದು ಅವನಿಗೆ ಸಾಧ್ಯವಾಗದಿದ್ದರೂ, ಅವಳ ಗಂಡನ ಸಂದೇಹವನ್ನು ಕೆಣಕದಿರಲು ಆಗಲಿಲ್ಲ. ಕುಷಿಸಂಕಟ ಏನಾದರೂ ಮನಸ್ಸುಮಾಡಿದ್ದಿದ್ದರೆ, ಅವ ನೊಡನೆ ಸಾಮೀಲಾಗಿ, ಆ ಗಂಡನ ಕಣ್ಣಿಗೆ ಮಣ್ಣು ಹಾಕಬಹುದಾಗಿತ್ತು. ಆದರೆ ಪತಿವ್ರತೆಯಾದ ಅವಳು, ತಾನು ತಪ್ಪುದಾರಿಯನ್ನು ತುಳಿಯಲು ಒಪ್ಪದೆ, ತನ್ನ ನಿಃಸ್ಪೃಹತೆಯನ್ನು ಉಳಿಸಿಕೊಳ್ಳಲು ಎಷ್ಟೆಷ್ಟು ಕೆಲಸ ಮಾಡಿದರೆ, ಅಷ್ಟಷ್ಟೂ ಅವಳ ಗಂಡ ಅವಳು ಮಾಡದೇ ಬಿಟ್ಟ ಅಪರಾ ಧವೇ ಇಲ್ಲ ಎಂದು ನಿಶ್ಚಯಮಾಡಿಕೊಂಡ.

ಕಾಪಟ ಕುಳ್ಳನಾದರೂ, ಕ್ಷುದ್ರನಾದರೂ, ಅವನಿಗೆ ತುಂಬ ಅಭಿಮಾನ. ತನ್ನ ಹೆಂಡತಿಯ ಪಾತಿವ್ರತ್ಯದಿಂದಲೇ ತನ್ನ ಪೌರುಷ ಉಳಿಯತಕ್ಕದ್ದು, ಎಂದು ಅವನ ವಿಶ್ವಾಸ. ಆದ್ದರಿಂದ "ಇಷ್ಟು ಚೆಲು

ವಾಗಿರುವೆಯಲ್ಲಾ ! ಊರೆಲ್ಲಾ ನಿನ್ನನ್ನು ನೋಡುವರಲ್ಲಾ ! " ಎಂದು ಅವಳನ್ನು ಕಾಡಿ, ಗೋಳಾಡಿಸುತ್ತಿದ್ದ. ಪಾಪ, ಕುಷಿಸಂಕಟಗಳ ಪಾಡು ಯಾರಿಗೂ ಬೇಡ. ಇತ್ತ ತಾನು ಪತಿವ್ರತೆಯಾದರೂ ಪತಿಯ ಕೈಯಲ್ಲಿ ಸುಮ್ಮನೆ ಅನ್ಯಾಯವಾಗಿ ಅನ್ನಿಸಿಕೊಳ್ಳಬೇಕು, ಅತ್ತ ತನಗೆ ಎಷ್ಟೇ ಆಸೆ ಯುಂಟಾದರೂ ಅದು ಈಡೇರದ ಹಾಗೆ ಅದನ್ನು ಅದುಮಿ ಅಡಗಿಸ ಬೇಕು.

ಒಂದು ವೇಳೆ ರಬಲಾಡನೇನಾದರೂ ತನ್ನ ಹಿಂದೆ ಮುಂದೆ ಹರಿ ದಾಡುವುದನ್ನು ಒಂದುವೇಳೆ ನಿಲ್ಲಿಸಿದರಾದರೂ ಗಂಡನ ಮತ್ಸರ ಇಳಿಯ ಬಹುದೇನೋ ಎಂದು ಅವಳ ನಂಬಿಕೆ; ಅದರಿಂದಲಾದರೂ ತನಗೇ ಮನಸ್ಸಿನಲ್ಲಿದ್ದ ಅಘರ್ಮದ ಆಸೆ ಅಳಿಸಿಹೋದೀತೋ ಎಂದು ಆಸೆ. ಹಾಗೆಂದುಕೊಂಡು ರಬಲಾಡನಿಗೆ ಹೀಗೊಂದು ಕಾಗದ ಬರೆದಳು :

" ನಿನಗೆ ಏನಾದರೂ ಒಳ್ಳೆಯತನವಿರುವುದಾದರೆ, ದಯಮಾಡಿ ನನ್ನನ್ನು ಗೋಳಾಡಿಸಬೇಡ. ನೀನು ನನ್ನನ್ನು ಪ್ರೀತಿಸುವೆಯೆಂದು ಗೊತ್ತು; ಆದರೆ ಅದೇ ಪ್ರೀತಿಯೇ ನನ್ನನ್ನು ನನ್ನ ಗಂಡನ ನಿರಾಧಾರ ವಾದ ಸಂಶಯಗಳಿಗೂ ಅವರ ಪರಿಣಾಮವಾದ ಕ್ರೌರ್ಯಗಳಿಗೂ ಗುರಿ ಮಾಡುತ್ತಿದೆ. ಈ ಗಂಡನೊಡನೆ ನಾನು ಬದುಕಿರುವವರೆಗೂ ಸಂಸಾರ ಮಾಡಬೇಕೆಂಬುದನ್ನು ಮರೆಯದಿರು. ನನ್ನ ಪಾಡು ಇದಿಷ್ಟೇ ಆಗಿದ್ದರೆ, ಹೇಳುತ್ತಿರಲಿಲ್ಲ. ದಯಮಾಡಿ, ನನ್ನ ಹಿಂದೆ ಮುಂದೆ ಹರಿದಾಡಬೇಡ. ಈ ನಿನ್ನ ಪ್ರೇಮದಿಂದ ನಿನಗೂ ಅಸುಖ, ನನಗೂ ಅಸುಖ. "

ಇಷ್ಟು ನಿಷ್ಕಪಟವಾದ, ಇಷ್ಟು ಮೃದುವಾದ ಕಾಗದವು ತನ್ನ ನಿರೀ ಕ್ಷೆಗೆ ವಿರುದ್ಧವಾದ ಪರಿಣಾಮವನ್ನು ಉಂಟುಮಾಡುತ್ತದೆಂದು, ಪಾಪ, ಅವಳು ಕಾಣಳು. ಆ ಕಾಗದದಿಂದ ರಬಲಾಡನ ಆಸೆಯೆಂಬ ಅಗ್ನಿಗೆ ತುಪ್ಪ ಹುಯಿದ ಹಾಗಾಯಿತು. " ಏನೇ ಆದರೂ ಆಗಲಿ, ಅವಳನ್ನು ನೋಡಿಯೇ ತೀರಬೇಕು ! " ಎಂದು ಅವನು ಕಾತರಪಟ್ಟ.

ಕಾಪಟಿ, ತನ್ನ ಸಂಶಯಪ್ರವೃತ್ತಿಗೆ ತಕ್ಕ ಹಾಗೆ, ಏನೇನು ನಡೆ ಯುವುದೋ ಅದನ್ನು ಬಂದು ವರದಿಮಾಡಲು ನಂಬಿಕಸ್ಥರಾದ ಗೂಢ ಚಾರರನ್ನು ನೇಮಿಸಿದ್ದ. ಅವರು ಬಂದು, " ಇವತ್ತು ರಬಲಾಡ,

ಸಂನ್ಯಾಸಿಯ ಸೋಗಿನಲ್ಲಿ, ನಿನ್ನ ಹೆಂಡತಿಯ ಹತ್ತಿರ ಭಿಕ್ಷೆ ಬೇಡುವುದಕ್ಕೆ ಬರುತ್ತಾನೆ" ಎಂದು ತಿಳಿಸಿದರು. "ಓಹೋ! ಮುಳುಗಿಹೋಯಿತು ನನ್ನ ಮರ್ಯಾದೆ!" ಎಂದುಕೊಂಡ, ಕಾಪಟ. ಅವನು ಸಂಸಾರಿಯನ್ನಾದರೂ ನಂಬಿಯಾನು; ಸಂನ್ಯಾಸಿಯನ್ನು ಮಾತ್ರ ನಂಬಲಾರ. ರಬಲಾಡ ಬಂದಾಗ, ಮರೆಯಲ್ಲಿದ್ದು ಹೊಂಚಿ ಮೇಲೆ ಬಿದ್ದು ಅವನನ್ನು ಚಚ್ಚಿಬಿಡಿ, ಎಂದು ಕೆಲವರನ್ನು ನೇಮಿಸಿದ.

ನೇಮಕವಾದವರು ಸ್ವಾಮಿಗಿಂತಲೂ ಹೆಚ್ಚು ಕಾರ್ಯತತ್ಪರರು. ರಬಲಾಡ ಬಂದನೋ ಇಲ್ಲವೋ ಇವರು ಅವನನ್ನು ಸ್ವಾಗತಿಸಿದರು. ಅವನು ಎಷ್ಟೆಷ್ಟೋ ಕೂಗಿಕೊಂಡ—ತಾನು ನಿಜವಾಗಿಯೂ ಸಂನ್ಯಾಸಿ ಅಂತ; ಸಂನ್ಯಾಸಿಗಳನ್ನು ಹಾಗೆ ಸದೆಯಬಾರದು, ಅಂತ. ಮುಂದು ಹಿಂದು ನೋಡದೆ, ಅವನನ್ನು ಚಚ್ಚಿದರು. ತಲೆಯಮೇಲೆ ಬಿದ್ದ ಒಂದು ಏಟಿನಿಂದ ನರಳಿ, ಅವನು ಹತ್ತನೆಯ ದಿವಸ ತೀರಿಕೊಂಡ.

ಹಿಪ್ಪೋ ಊರಿನವರೆಲ್ಲ ಅವನಿಗಾಗಿ ಕಣ್ಣೀರು ಕರೆದು ಗೋಳಿರಿಸಿದರು. ಕುಷಿಸಂಕಟಳ ದುಃಖ ಅಳಿದು ತೀರದು. ಕಾಪಟನಿಗೂ ಪಶ್ಚಾತ್ತಾಪವಾದರೂ, ಅದಕ್ಕೆ ಕಾರಣ ಮಾತ್ರ ಬೇರೆ: ಅವನು ಒಂದು ಅಸಹ್ಯವಾದ ಪೇಚಿನಲ್ಲಿ ಸಿಕ್ಕಿಬಿದ್ದಿದ್ದ.

ರಬಲಾಡ ಅದೇ ಊರಿನ ನಗರಾಧಿಕಾರಿಗೆ ಬಂಧು. ತನ್ನ ಬಂಧುವಧೆಗೆ ಕಾರಣನಾದವನನ್ನು ಕ್ರೂರವಾಗಿ ಶಿಕ್ಷಿಸಿ, ಊರಿಗೊಂದು ಉದಾಹರಣೆ ತೋರಿಸುತ್ತೇನೆಂದು ಅವನು ನಿಶ್ಚಯಿಸಿದ್ದ. ಅವನಿಗೆ ಮೊದಲಿಂದಲೂ ಕಾಪಟನ ಮೇಲೆ ಕಣ್ಣಿದ್ದೇ ಇತ್ತು; ನ್ಯಾಯಾಸ್ಥಾನದಲ್ಲಿ ಒಂದೆರಡು ಸಲ ಇಬ್ಬರಿಗೂ ಮನಸ್ತಾಪ ಬಂದಿತ್ತು. ನೆಪ ಸಿಕ್ಕೀತೇ ಎಂದು ಕಾಯುತ್ತಿದ್ದ. ಈಗ ಸಿಕ್ಕಿತು, ಸಿಕ್ಕಿತು, ಎಂದು ಹಿಗ್ಗಿದ.

ಹೀಗೆ, ಕುಷಿಸಂಕಟ, ತನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವ ಭರದಲ್ಲಿ ತನ್ನ ಪ್ರಣಯಿ ಕೊಲೆಯಾದುದನ್ನು ಕಂಡಳು, ತನ್ನ ಗಂಡ ಎಲ್ಲಿ ಗಲ್ಲಿಗೆ ಹೋಗುವನೋ ಎಂಬ ಭೀತಿಯನ್ನು ಅನುಭವಿಸಿದಳು. ನಾನು ಮೊದಲೇ ಎಂದ ಹಾಗೆ, ಅವಳು ರಬಲಾಡನ ಪ್ರಲೋಭನೆಗಳಿಗೆ ಒಪ್ಪಿದ್ದಿದ್ದರೆ, ತನ್ನ ಗಂಡನ ಕಣ್ಣಿಗೆ ಮಣ್ಣು ಹಾಕಬಹುದಾಗಿತ್ತು.

ಅಂತೂ, ಹಿಂದೆ ಆ ಸ್ವಾಮಿ ಹೇಳಿದ್ದ ಭವಿಷ್ಯದ ಮೊದಲನೆಯ ಅರ್ಧ ನಿಜವಾಯಿತು. ಉಳಿದ ಇತರ ಅರ್ಧ ಅದೂ ನಿಜವಾದೀತೋ ಎಂದು ಕುಷಿಸಂಕಟ, ಆತನ ಮಾತನ್ನು ಜ್ಞಾಪಿಸಿಕೊಂಡು, ತುಂಬಾ ದಿಗಿಲುಪಟ್ಟಳು. ಕಡೆಗೆ, ಅದೃಷ್ಟವನ್ನು ಮೀರುವವರು ಯಾರು ಎಂದು ನೆಮ್ಮದಿ ಮಾಡಿಕೊಂಡು, ದೈವಕ್ಕೆ ತನ್ನನ್ನು ಒಪ್ಪಿಸಿಕೊಂಡಳು. ಆಗ ಬೇಕಾಗಿದ್ದದ್ದು ಆಗಿಹೋಯಿತು.

ಹಿಪ್ಪೋದ ನಗರಾಧಿಕಾರಿ, ರಬಲಾಡನ ಬಂಧು, ಭೋಗಿಯೇನಲ್ಲವಾದರೂ ನಡತೆಯೂ ಇಲ್ಲದ ಶುದ್ಧ ಪಶು. ಅವನೆಂದರೆ ಆ ಊರಿನ ಹೆಂಗಸರು ಹೆದರುತ್ತಿದ್ದರು. ಅವನು ಕುಷಿಸಂಕಟಳಿಗೆ ಹೇಳಿಕಳಿಸಿದ. ಅವಳು ಕಣ್ಣೀರು ಕರೆಯುತ್ತ ಬಂದರೂ, ಆ ಕಣ್ಣೀರೇ ಅವಳ ಕಾಂತಿಯನ್ನು ಇಮ್ಮಡಿ ಮಾಡಿತ್ತು.

"ಏನಮ್ಮ? ನಿನ್ನ ಗಂಡನನ್ನು ಗಲ್ಲಿಗೆ ಹಾಕಬೇಕಾಗಿದೆ. ನಿನಗೆ ಇಷ್ಟವಿದ್ದರೆ, ನೀನು ಅವನನ್ನು ಉಳಿಸಬಹುದು."

"ಅವನನ್ನು ಉಳಿಸುವುದಕ್ಕಾಗಿ ನನ್ನ ಜೀವವನ್ನಾದರೂ ಕೊಟ್ಟೇನು" ಅಂದಳು, ಕುಷಿಸಂಕಟ.

"ನಾನು ಅದನ್ನು ಕೇಳಲಿಲ್ಲ" ಅಂದ.

"ಹಾಗಾದರೆ ಏನು ಕೊಡಬೇಕು?" ಎಂದಳು.

"ಒಂದು ರಾತ್ರಿ ನಿಂತರೆ ಸಾಕು" ಎಂದ.

"ಅದಕ್ಕೆ ನನಗೆ ಸ್ವಾತಂತ್ರ್ಯವಿಲ್ಲ. ರಾತ್ರಿಗಳು ನನ್ನ ಗಂಡನವು. ಅವನನ್ನು ಉಳಿಸಲು ಬೇಕಾದರೆ ಸಾಯಲೂ ಸಿದ್ಧಳಾಗಿದ್ದೇನೆ. ಆದರೆ ನನ್ನ ಮಾನವನ್ನು ಮಾರಲಾರೆ."

"ನಿನ್ನ ಗಂಡನೇ ಒಪ್ಪಿದರೆ?"

"ಆತ ನನಗೆ ಸ್ವಾಮಿ. ಸ್ವಾಮಿ ತನ್ನ ಸ್ವತ್ತನ್ನು ಹೇಗೆ ವಿನಿಯೋಗಿಸುವುದಕ್ಕೂ ಸ್ವತಂತ್ರನು. ಆದರೆ ನನ್ನ ಗಂಡ ತುಂಬ ಅಭಿಮಾನಿ. ಅವನು ಇಂಥದಕ್ಕೆ ಎಂದೂ ಒಪ್ಪನು. ಸತ್ತಾದರೂ ಸತ್ತಾನು ಅಲ್ಲದೆ, ಮಾನಭಂಗಕ್ಕೆ ಅವನು ಒಪ್ಪನು."

"ನೋಡೋಣ ನೋಡೋಣ."

—ಎಂದು ನಗರಾಧಿಕಾರಿ ರೋಷಗೊಂಡು, ಆ ಕೂಡಲೆ ಕಾಪಟ ನನ್ನು ಸೆರೆ ಹಿಡಿಸಿ ತರಿಸಿದ.

"ಹೀಗಾದರೆ, ಬದುಕಿಕೊಳ್ಳುತ್ತೀಯೆ. ಹೀಗಾಗದಿದ್ದರೆ, ನಿನಗೆ ಗಲ್ಲು. ತಡಮಾಡಬೇಡ. ಬೇಗ ಹೇಳು" ಎಂದು ಉಗ್ರವಾಗಿ ಕೂಗಿದ.

ಕಾಪಟ ಕುಳ್ಳನಾದರೂ ಕೂಡಲೆ ಒಪ್ಪಲಿಲ್ಲ. ತುಂಬ ಒಪ್ಪಿಸ ಬೇಕಾಯಿತು. ಕಡೆಗೆ, ಏನು ಮಾಡಿದ? ಅವನ ಅವಸ್ಥೆಯಲ್ಲಿದ್ದವರು ಏನು ಮಾಡುತ್ತಿದ್ದರೋ ಅದೇ ಮಾಡಿದ. ಅವನ ಹೆಂಡತಿಯ ಕರುಣೆ ಯಿಂದ ಅವನ ಜೀವ ಉಳಿಯಿತು.

ಇದೇ, ಆ ಸ್ವಾಮಿ ಹೇಳಿದ ಮೂರು ಸಲದಲ್ಲಿ ಮೊದಲನೆಯ ಸಲ.

ಅದೇ ದಿವಸ ಅವಳ ಮಗ ಯಾವುದೋ ವಿಚಿತ್ರವಾದ ವ್ಯಾಧಿ ಯಿಂದ ನರಳುತ್ತ ಮಲಗಿದ. ಅದು ಯಾವ ವ್ಯಾಧಿಯೆಂದು ಹಿಪ್ಪೋ ದಲ್ಲಿ ಯಾವ ವೈದ್ಯರಿಗೂ ತಿಳಿಯದು. ಆಕ್ಟಿಲಾ ಎಂಬ ಊರಲ್ಲಿ ಇದ್ದ ಒಬ್ಬ ವೈದ್ಯನಿಗೆ ಮಾತ್ರ ಆ ವ್ಯಾಧಿಯ ಪರಿಹಾರ ಗೊತ್ತಿತ್ತು. ಆಕ್ಟಿಲಾ ನಗರದಿಂದ ಹಿಪ್ಪೋ ನಗರಕ್ಕೆ ಕೆಲವೇ ಯೋಜನಗಳ ದೂರವಾದರೂ, ಒಂದು ಊರಿನ ವೈದ್ಯ ಇನ್ನೊಂದು ಊರಿಗೆ ಹೋಗಿ ಔಷಧ ಕೊಡುತ್ತಿರ ಲಿಲ್ಲ. ಆದ್ದರಿಂದ ಕುಷಿಸಂಕಟ ತಾನೇ ಔಷಧಿಗಾಗಿ ವೈದ್ಯನ ಊರಿಗೆ ಹೋಗಬೇಕಾಯಿತು. ಹೋಗುವಾಗ ಜೊತೆಗೆ ಅವಳ ತಮ್ಮನೂ ಕಾವ ಲಿಗೆ ಹೊರಟ. ಅಕ್ಕ ತಮ್ಮ ತುಂಬಾ ಅನ್ಯೋನ್ಯವಾಗಿದ್ದರು.

ದಾರಿಯಲ್ಲಿ ಯಾರೋ ದರೋಡೆಗಾರರು ಅವರನ್ನು ತಡೆದು ನಿಲ್ಲಿಸಿ ದರು. ಅವರ ಮುಖಂಡ ಅವಳ ಚಲುವಿಗೆ ಮರುಳಾಗಿಹೋಗಿ, "ನೀನು ಒಪ್ಪಿದರೆ ಸರಿ, ಇಲ್ಲದಿದ್ದರೆ ನಿನ್ನ ತಮ್ಮನ ಕತೆ ಮುಗಿದ ಹಾಗೆಯೇ!" ಎಂದ. ಏನು ಮಾಡಿಯಾಳು, ಪಾಪ? ಅದೇ ಆಗತಾನೆ ಅವಳು ತನಗೆ ಅಷ್ಟೇನೂ ಪ್ರಿಯನಲ್ಲದ ಪತಿಯ ಪ್ರಾಣವನ್ನು ಉಳಿಸಿದ್ದಳು. ಈಗ ತನಗೆ ತುಂಬ ಪ್ರಿಯನಾದ ತಮ್ಮನನ್ನು ಕಳೆದುಕೊಳ್ಳುವಹಾಗಾಗಿದೆ. ಅಲ್ಲದೆ, ಅಲ್ಲಿ ಮಗನ ಸ್ಥಿತಿ ಬೇರೆ ಚಿಂತೆಗಿಟ್ಟುಕೊಂಡಿದೆ. ವೈದ್ಯನಿಂದ ಪರಿಹಾರ ಪಡೆಯಲು ಕ್ಷಣವಾದರೂ ತಡವಾಗಬಾರದು. ಆದ್ದರಿಂದ, "ದೇವರೇ!" ಎಂದು ಒಪ್ಪಿದಳು.

ಇದು, ಮೂರು ಸಲದಲ್ಲಿ ಎರಡನೆಯ ಸಲ.

ವೈದ್ಯನ ಮನೆಗೆ ಬಂದಳು. ಅವನೋ ಬಹು ಷೋಕಿಲಾಲ, ಭೋಗ ಪುರುಷ. ಕುಷಿಸಂಕಟ ತನ್ನ ಮಗನ ವ್ಯಾಧಿಯ ಚಿಹ್ನೆಗಳನ್ನು ಹೇಳಿದಳು, ವೈದ್ಯನಿಗೆ ಬೊಗಸೆ ತುಂಬ ಹಣ ನೀಡಿದಳು.

"ನಿನ್ನಂತವಳಿಂದ ಈ ತೆರದ ನಾಣ್ಯವನ್ನು ನಾನು ನಿರೀಕ್ಷಿಸುವುದಿಲ್ಲ. ಬೇಕಾದರೆ ಇಂತಹದನ್ನು ನಾನೇ ಕೊಟ್ಟೇನು. ನಿನ್ನನ್ನು ನೋಡಿ ನನಗೆ ಉಂಟಾಗಿರುವ ವ್ಯಾಧಿಯನ್ನು ಪರಿಹಾರ ಮಾಡಿದರೆ, ನಿನ್ನ ಮಗನ ವ್ಯಾಧಿಗೆ ತಕ್ಕ ಪರಿಹಾರವನ್ನು ನಾನು ಹೇಳುತ್ತೇನೆ." ಎಂದ.

ಅವನು ಕೇಳುವ ಶುಲ್ಕ ಅತಿಯಾಯಿತೆಂದು ಅವಳಿಗೆನ್ನಿಸಿತು. ಆದರೆ ವಿಧಿಯ ವಿಚಿತ್ರವಾದ ಗತಿ ಅವಳಿಗೆ ರೂಢಿಯಾಗಿಹೋಗಿತ್ತು. ವೈದ್ಯನೋ ಮೊಂಡ, ಬೇರೆ ಏನು ಕೊಡುತ್ತೇನೆಂದರೂ ಒಲ್ಲ. ಕುಷಿಸಂಕಟ ತನ್ನ ಗಂಡನ ಅಪ್ಪಣೆಯನ್ನು ಬೇಡಲು ಅವಕಾಶವಿರಲಿಲ್ಲ. ಈ ಅಲ್ಪವನ್ನು ಇಲ್ಲವೆಂದು ಹೇಳಿ, ತನ್ನ ಮುದ್ದು ಮಗನನ್ನು ನೀಗಿಕೊಳ್ಳಲು ಅವಳ ಮನಸ್ಸು ಒಪ್ಪಲಿಲ್ಲ. ಅವಳು ಎಷ್ಟು ಒಳ್ಳೆಯ ಅಕ್ಕನೋ ಅಷ್ಟೇ ಒಳ್ಳೆಯ ತಾಯಿ ಕೂಡ. ತೆರಲೇಬೇಕಾದ ಬೆಲೆತೆತ್ತಳು.

ಇದು ಆ ಮೂರು ಸಲದಲ್ಲಿ ಕಡೆಯ ಸಲ.

ಹೀಗೆ, ಕುಷಿಸಂಕಟ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿ, ತನ್ನ ಪ್ರಿಯನ ನಾಶಕ್ಕೆ ಕಾರಣಳಾದಳು; ತನ್ನ ಗಂಡನನ್ನು ಗಲ್ಲಿನ ಮರಕ್ಕೆ ತಂದಿಟ್ಟಳು. ಆದರೆ, ಮನಸ್ಸಿಲ್ಲದಿದ್ದರೂ ಒಪ್ಪಿ ತನ್ನ ಗಂಡನ, ತಮ್ಮನ, ಮಗನ ಪ್ರಾಣಗಳನ್ನು ಉಳಿಸಿಕೊಂಡಳು. ಆ ಮಹಾತಾಯಿ ತಾನು ತನ್ನನ್ನೇ ಅರ್ಪಿಸಿಕೊಂಡು ತನ್ನ ಬಂಧು ಬಾಂಧವರ ಪ್ರಾಣಗಳನ್ನು ಕಾಪಾಡಿದ್ದರಿಂದ, ಊರಿನವರೆಲ್ಲ ಅವಳನ್ನು ಕೊಂಡಾಡಿದರು. ಅವಳು ಸತ್ತ ಮೇಲೆ, ಅವಳನ್ನು ನಾಡದೇವಿ ಎಂದು ಕರೆದು, ಅವಳ ಸಮಾಧಿಯ ಕಲ್ಲಿನ ಮೇಲೆ—

**" ಮಹತ್ತಾದ ಕಲ್ಯಾಣಕ್ಕಾಗಿ ಅಲ್ಪವಾದ ಅಪರಾಧ "**

—ಎಂದು ಕೆತ್ತಿಸಿದರು.

# ಕಷ್ಟಾದದ್ದೂ ಬಿಳುಪಾದದ್ದೂ

—— 0 ——

ಕಾಂದಹಾರದ ಪ್ರಾಂತದಲ್ಲಿರುವವರಿಗೆಲ್ಲ ಯುವಕನಾದ ರುಸ್ತು ಮನ ವೀರಚರ್ಯೆಗಳ ಕತೆ ಗೊತ್ತು. ಅವನ ತಂದೆ ಆ ದೇಶದಲ್ಲಿ ನಮ್ಮ ಪಾಳಯಗಾರನಂಥ ಅಂತಸ್ತಿನ ವ್ಯಕ್ತಿ. ಅವನು ತಮ್ಮ ಅಂತಸ್ತಿಗೆ ತಕ್ಕ ಪಾಳಯಗಾರನೊಬ್ಬನ ಮಗಳನ್ನು ತನ್ನ ಮಗನಿಗೆ ತಂದುಕೊಳ್ಳ ಬೇಕೆಂದು ಗೊತ್ತುಮಾಡಿಕೊಂಡಿದ್ದ. ಎರಡು ಮನೆತನದವರೂ ಆ ಸಂಬಂಧವನ್ನು ಗಾಢವಾಗಿ ಬಯಸುತ್ತಿದ್ದರು. ರುಸ್ತುಂ ತನ್ನ ತಾಯಿ ತಂದೆಗೆ ನೆರವಾಗಿ, ತನ್ನ ಹೆಂಡತಿಗೆ ಸುಖ ಕೊಟ್ಟು, ತಾನು ಅವಳಿಂದ ಸುಖಪಡಬೇಕಾಗಿತ್ತು.

ಆದರೆ, ಅದೃಷ್ಟ ಕಡಿಮೆಯಾಗಿ, ಅವನು ಕಾಬೂಲಿನ ಸಂತೆಯಲ್ಲಿ ಕಾಶ್ಮೀರದ ರಾಜಕುಮಾರಿಯನ್ನು ನೋಡಿಬಿಟ್ಟಿದ್ದ.

ಕಾಶ್ಮೀರದ ರಾಜ ಕಾಬೂಲಿನ ಸಂತೆಗೆ ತನ್ನ ಮಗಳನ್ನು ಏಕೆ ಕರೆದುಕೊಂಡು ಬಂದಿದ್ದನೆಂದರೆ: ಅವನು ಅತ್ಯಮೂಲ್ಯವಾದ ಎರಡು ವಸ್ತುಗಳನ್ನು ಕಳೆದುಕೊಂಡಿದ್ದ. ಅವುಗಳಲ್ಲಿ, ಒಂದು— ಹೆಬ್ಬೆರಳಿನ ಗಾತ್ರದ ವಜ್ರ; ಅದರ ಮೇಲೆ ತನ್ನ ಮಗಳಿನ ಆಕಾರವನ್ನು ಕೆತ್ತಿಸಿದ್ದ. ಇನ್ನೊಂದು—ಎಲ್ಲಿಗೆ ಹೋಗಬೇಕೆಂದು ಉದ್ದೇಶಿಸಿದರೆ ಅಲ್ಲಿಗೆ ತನ್ನಿಂದ ತಾನೆ ಹಾರಿಹೋಗುವ ಒಂದು ಭರ್ಜಿ.

ರಾಜನ ಊಳಿಗದಲ್ಲಿದ್ದ ಫಕೀರನೊಬ್ಬ ಆ ಅನರ್ಘವಾದ ವಸ್ತು ಗಳನ್ನು ಅಪಹರಿಸಿ, ಅದನ್ನು ರಾಜಕುಮಾರಿಯ ಕೈಗೆ ಒಪ್ಪಿಸಿದ್ದ.

"ಈ ಎರಡನ್ನೂ ಜೋಪಾನವಾಗಿ ಕಾಪಾಡಿಕೊ. ನಿನ್ನ ಸೌಭಾಗ್ಯ ಇವುಗಳನ್ನು ಅವಲಂಬಿಸಿದೆ" ಎಂದಿದ್ದ.

ಹಾಗೆಂದು ಹೊರಟುಹೋದವನು ಮತ್ತೆ ಕಾಣಿಸಿಕೊಳ್ಳಲಿಲ್ಲ.

ಕಾಶ್ಮೀರದ ರಾಜನಾದರೋ, ಏನು ಮಾಡಲೂ ತೋಚದೆ, ಕಾಬೂಲಿನ ಸಂತೆಗೆ ಬಂದಿದ್ದ. ಅಲ್ಲಿಗೆ ಪ್ರಪಂಚದ ನಾಲ್ಕು ಮೂಲೆ

ಗಳಿಂದ ವ್ಯಾಪಾರಗಾರರು ಬರುತ್ತಾರೆ, ಅವರಲ್ಲಿ ಯಾರಿಗಾದರೂ ಆ ವಜ್ರದ, ಅಥವಾ ಆ ಮಾಯಾಭರ್ಜಿಯ ವಿಷಯ ಗೊತ್ತಿರಬಹು ದೇನೋ ಎಂದು ಅವನ ಆಸೆ. ಬರುವಾಗ ಮಗಳನ್ನೂ ಜೊತೆಯಲ್ಲಿ ಕರೆದು ತಂದಿದ್ದ. ಅವಳು ಆ ವಜ್ರವನ್ನು ತನ್ನ ನಡುಪಟ್ಟಿಯಲ್ಲಿ ಬಚ್ಚಿ ಟ್ಟಿದ್ದಳು; ಭರ್ಜಿಯನ್ನು ಅಷ್ಟು ಅಚ್ಚುಕಟ್ಟಾಗಿ ಮುಚ್ಚಿಡುವುದಕ್ಕೆ ಆಗದ್ದರಿಂದ, ಕಾಶ್ಮೀರದಲ್ಲಿಯೇ ಒಂದು ಪೆಟ್ಟಿಗೆಯ ಅಡಿಯಲ್ಲಿ ಅಡಗಿ ಸಿಟ್ಟಿದ್ದಳು.

ರುಸ್ತುಮನೂ ಅವಳೂ ಒಬ್ಬರನ್ನೊಬ್ಬರು ನೋಡಿದರು. ಒಡನೆ, ತಮ್ಮ ಯೌವನಕ್ಕೆ ತಕ್ಕಂತೆ, ಅಲ್ಲಿನ ವಾಯುಗುಣಕ್ಕೆ ಅನುಗುಣವಾಗಿ, ಒಬ್ಬರಲ್ಲೊಬ್ಬರು ತೀವ್ರವಾಗಿ ಅನುರಾಗ ಪಡೆದರು. ರಾಜಕುಮಾರಿ ಅವನಿಗೆ, ತನ್ನ ಅನುರಾಗದ ಗುರುತಾಗಿ, ಆ ಹೆಬ್ಬೆರಳಿನ ಗಾತ್ರದ ವಜ್ರವನ್ನು ಕೊಟ್ಟಳು. ಕ್ಷಿಪ್ರದಲ್ಲಿಯೇ ಕಾಶ್ಮೀರಕ್ಕೆ ಬಂದು, ಯಾರಿಗೂ ಕಾಣದಂತೆ ಅವಳನ್ನು ದರ್ಶನಮಾಡುವೆನೆಂದು ಅವನು ವಾಗ್ದಾನ ಮಾಡಿದನು.

ರುಸ್ತುಮನಿಗೆ ಇಬ್ಬರು ಆಪ್ತರು. ಅವರೇ ಅವನಿಗೆ ಕಾರ್ಯದರ್ಶಿ ಗಳು, ನರ್ಮಸಚಿವರು, ಮನೆವಾರ್ತೆಯವರು, ಸೇವಕರು. ಒಬ್ಬನ ಹೆಸರು—ಗೋಮೇಧಿಕ; ಒಳ್ಳೇ ಎತ್ತರವಾದ ಸುಂದರವಾದ ವ್ಯಕ್ತಿ; ಹೆಣ್ಣಿನಂತೆ ಚೆಲುವ, ತುಂಬ ಹಿತವಂತ, ತುಂಬ ವಿವೇಕಿ. ಇನ್ನೊಬ್ಬನ ಹೆಸರು—ಕರಿಯಮುರ. ಹೆಸರಿನ ಹಾಗೆಯೇ ಬಣ್ಣವೂ ಕಪ್ಪಾದರೂ ಒಳ್ಳೇ ಸ್ಫುರದ್ರೂಪ. ಗೋಮೇಧಿಕನಿಗಿಂತ ಜಾಣ, ಅವನಿಗಿಂತ ಸಾಹಸಿ. ರುಸ್ತುಂ ತನ್ನ ಕಾಶ್ಮೀರ ಪ್ರಯಾಣದ ಸುದ್ದಿಯನ್ನು ಅವರಿಬ್ಬರಿಗೆ ತಿಳಿಸಿದ. ಗೋಮೇಧಿಕ, ತನ್ನ ಯಜಮಾನನಿಗೆ ಅಸಮಾಧಾನವಾಗದ ಹಾಗೆ, ದಾರಿಯಲ್ಲಿ ಮುಂದೆ ಒದಗುವ ಅಪಾಯಗಳೆಲ್ಲ ಮನದಟ್ಟುವ ಹಾಗೆ, ಸ್ವಾಮಿಭಕ್ತಿಯಿಂದ ಉತ್ಸಾಹದಿಂದ ಎಚ್ಚರಿಕೆ ಹೇಳಿದ. "ನೀನು ಇಲ್ಲಿಂದ ಹೋದರೆ, ಎರಡು ಸಂಸಾರಗಳಿಗೆ ಅತಿಯಾದ ದುಃಖವಾಗುವು ದಲ್ಲವೆ? ನಿನ್ನ ತಾಯಿ ತಂದೆಯರ ಮನಸ್ಸಿಗೆ ನೋವುಂಟುಮಾಡ ಬಹುದೆ?" ಎಂದು ರುಸ್ತುಮನ ಸ್ಥೈರ್ಯವನ್ನು ಸಡಿಲಿಸಿದ. ಆದರೆ

ಕರೀಮುರ ಅದಕ್ಕೆ ವಿರುದ್ಧವಾದ ಬೋಧನೆಮಾಡಿ, ರುಸ್ತುಮನ ಮನಸ್ಸಿನ ಶಂಕೆಗಳನ್ನು ನೀಗಿಸಿದ.

ಅಷ್ಟು ದೂರದ ಪ್ರಯಾಣವೆಂದರೆ ಹಣ ಬೇಕೇ ಬೇಕು. ಆ ಹಣವನ್ನು ಸಂಪಾದಿಸುವ ಕಾರ್ಯದಲ್ಲಿ ವಿವೇಕಿಯಾದ ಗೋಮೋಧಿಕ ಸಹಾಯಮಾಡಲು ಇಷ್ಟಪಡಲಿಲ್ಲ. ಆದರೆ ಕರೀಮುರ ಸಮೃದ್ಧಿಯಾಗಿ ಒದಗಿಸಿದ. ರುಸ್ತುಮನಿಗೆ ಆ ರಾಜಕುಮಾರಿ ಕೊಟ್ಟಿದ ವಜ್ರವನ್ನು ತೆಗೆದುಕೊಂಡು, ಅದರ ಹಾಗೆಯೇ ಕೃತಕವಾದುದು ಇನ್ನೊಂದನ್ನು ಮಾಡಿಸಿ, ಅದನ್ನು ರುಸ್ತುಮನ ಕೈಲಿಟ್ಟು, ನೈಜವಾದುದನ್ನು ಸಾವಿರಾರು ರೂಪಾಯಿಗಳಿಗೆ ಅಡವಿಟ್ಟು, ಹಣ ಒದಗಿಸಿದ.

ರುಸ್ತುಂ, ಹಣ ಕೈಗೆ ಬಂದಮೇಲೆ, ಪ್ರಯಾಣಕ್ಕೆ ಸಿದ್ಧನಾದ. ಒಂದು ಆನೆಯ ಮೇಲೆ ತಮ್ಮ ಸಾಮಾನನ್ನೆಲ್ಲಾ ಹೇರಿಕೊಂಡು, ತಾವು ಕುದುರೆಗಳನ್ನು ಹತ್ತಿಕೊಂಡು, ಮೂವರೂ ಹೊರಟರು.

ಗೋಮೋಧಿಕ ಹೇಳಿದ : "ನೀನು ಹೊರಡುವ ಮೊದಲೇ, ಬೇಡ ಎಂದು ಎಷ್ಟೆಷ್ಟೋ ಹೇಳುವ ಸ್ವಾತಂತ್ರ್ಯ ವಹಿಸಿದೆ. ಹೇಳಿಯಾದ ಮೇಲೆ, ನೀನು ಹೇಳಿದ ಹಾಗೆ ಕೇಳುವುದು ನನ್ನ ಸೇವಾಧರ್ಮ. ನಿನ್ನಲ್ಲಿ ನನಗೆ ತುಂಬ ಪ್ರೀತಿ, ದಿಕ್‌ದಿಗಂತದವರೆಗೂ ನಿನ್ನನ್ನು ಹಿಂಬಾಲಿಸಿಯೇನು. ಆದರೆ, ಒಂದೇ : ಇಲ್ಲಿಂದ ಹೋಗುವ ಮೊದಲು, ಇಲ್ಲಿಂದ ಎರಡು ಯೋಜನದ ಆಚೆ ಇರುವ ದಿವ್ಯವಾಣಿಯ ದೇವಾಲಯಕ್ಕೆ ಹೋಗಿ, ಪ್ರಶ್ನೆ ಕೇಳಿಕೊಂಡು ಮುಂದೆ ಸಾಗೋಣ."

ರುಸ್ತುಂ ಒಪ್ಪಿದ. ದೇವವಾಣಿ ಹೀಗೆ ಹೇಳಿತು : "ನೀನು ಪೂರ್ವದ ಕಡೆಗೆ ಹೋದರೆ, ಪಶ್ಚಿಮದ ಕಡೆ ಇರುತ್ತೀಯೆ." ರುಸ್ತುಂಗೆ ಆ ಮಾತಿನ ರಹಸ್ಯ ಅರ್ಥವಾಗಲಿಲ್ಲ. ಕರೀಮುರನಾದರೋ, ಯಜಮಾನನಿಗೆ ಇಷ್ಟವಾದುದನ್ನೇ ಹೇಳುವವನು, ಅದಕ್ಕೆ ಏನೋ ಅನುಕೂಲವಾದ ಅರ್ಥ ಹೇಳಿ, ರುಸ್ತುಮನನ್ನು ಸಂತೋಷಪಡಿಸಿದ.

ಕಾಬೂಲಿನಲ್ಲಿ ಇನ್ನೂ ಒಂದು ದೇವವಾಣಿಯ ದೇವಾಲಯವಿತ್ತು. ಅಲ್ಲಿಗೂ ಹೋದರು. ಅಲ್ಲಿನ ದೇವವಾಣಿ ಹೇಳಿತು : "ನೀನು ಪಡೆದರೆ, ನೀನು ಪಡೆಯುವುದಿಲ್ಲ; ನೀನು ಗೆದ್ದರೆ, ನಿನ್ನ ಕೈ ನಡೆಯುವುದಿಲ್ಲ;

ನೀನು ರುಸ್ತುಮನಾದರೆ, ನೀನು ರುಸ್ತುಮನಾಗಿರುವುದಿಲ್ಲ" ಈ ಮಾತು ಮೊದಲಿನದಕ್ಕಿಂತ ಅಸ್ಪಷ್ಟವಾಗಿತ್ತು.

"ಜೋಪಾನ! ಎಚ್ಚರಿಕೆ!" ಎಂದ ಗೋಮೇಧಿಕ.

"ಏನೂ ಚಿಂತೆ ಬೇಡ!" ಎಂದ ಕರೀಮರ.

ತನ್ನ ಇಷ್ಟ ಏನೋ ಅದನ್ನೇ ಅನುಸರಿಸಿ ಅನುಮೋದಿಸಿ ಮಾತ ನಾಡುವ ಆ ಕರೀಮರನನ್ನು ಕಂಡರೆ, ರುಸ್ತುಮನಿಗೆ ತುಂಬ ಮೆಚ್ಚು.

ಕಾಬೂಲಿನಿಂದ ಹೊರಟವರು, ದಾರಿಯಲ್ಲಿ ಒಂದು ಕಾಡನ್ನು ದಾಟಿದ್ದು, ಅಲ್ಲಿ ವಿಶ್ರಾಂತಿಗಾಗಿ ಹುಲ್ಲಿನ ಮೇಲೆ ಕುಳಿತರು. ಕುದುರೆ ಗಳನ್ನು ಹುಲ್ಲುಮೇಯಲು ಬಿಟ್ಟರು. ಆನೆಯ ಮೇಲಿನ ಸಾಮಾನನ್ನು ಇಳಿಸಿ, ಊಟಕ್ಕೆ ಸಿದ್ಧಪಡಿಸಿಕೊಳ್ಳಬೇಕು ಎನ್ನುವಾಗ ನೋಡಿದರೆ, ಗೋಮೇಧಿಕನಾಗಲಿ ಕರೀಮರನಾಗಲಿ ಕಣ್ಣಿಗೆ ಬೀಳಲಿಲ್ಲ. ಎಲ್ಲಾ ದಿಕ್ಕುಗಳಲ್ಲೂ ಅವರನ್ನು ಹುಡುಕಿದ್ದಾಯಿತು. ಕಾಡಿನಲ್ಲಿ ಪ್ರತಿಧ್ವನಿ ಬರುವ ವರೆಗೂ ಕೂಗಿಕೊಂಡದ್ದಾಯಿತು. ಅವರು ಕಾಣಲಿಲ್ಲ, ಅವರಿಂದ ಉತ್ತರವೂ ಕೇಳಿಬರಲಿಲ್ಲ.

ಜೊತೆಗೆ ಬಂದ ಪರಿವಾರದವರು ರುಸ್ತುಮನಿಗೆ ಹೇಳಿದರು: "ಅವರು ಕಾಣಲಿಲ್ಲ. ನಾವು ಕಂಡದ್ದು ಒಂದು ರಣಹದ್ದು ಮಾತ್ರ. ಅದು ಒಂದು ಗಿಡಗನೊಡನೆ ಹೊಡೆದಾಡುತ್ತ ಅದರ ಗರಿಗಳನ್ನು ಕಿತ್ತು ಹಾಕುತ್ತಿತ್ತು."

ಆ ಎರಡು ಹಕ್ಕಿಗಳ ಕಾಳಗದ ಕತೆ ಕೇಳಿ, ರುಸ್ತುಮನಿಗೆ ಕುತೂಹಲ ಉಂಟಾಯಿತು. ಕಣ್ಣಾರೆ ಕಾಣೋಣವೆಂದು ಅಲ್ಲಿಗೆ ಓಡಿದ. ಹೋದರೆ, ಅಲ್ಲಿ ರಣಹದ್ದೂ ಇಲ್ಲ, ಗಿಡಗನೂ ಇಲ್ಲ. ಆದರೆ, ತಮ್ಮ ಆನೆ, ಅದರ ಬೆನ್ನ ಮೇಲಿನ ಸಾಮಾನನ್ನು ಇನ್ನೂ ಇಳಿಸಿರಲಿಲ್ಲ. ಅದನ್ನು ಒಂದು ಖಡ್ಗಮೃಗ ತನ್ನ ಕೊಂಬಿನಿಂದ ತಿವಿದು ಪೀಡಿಸುತ್ತಿತ್ತು. ರುಸ್ತುಮನನ್ನು ಕಂಡು, ಆ ಖಡ್ಗಮೃಗ ಬಾಲ ಮುದುರಿಕೊಂಡು ಓಡಿತು. ಆನೆಯನ್ನು ಹಿಂದಕ್ಕೆ ಕರೆದುತಂದರು. ಆದರೆ, ಬರುವ ವೇಳೆಗೆ ಕುದುರೆಗಳು ಮಾಯವಾಗಿದ್ದುವು.

"ಈ ಕಾಡಿನಲ್ಲಿ ಪ್ರಯಾಣಿಕರಿಗೆ ವಿಚಿತ್ರವಾದ ಅನುಭವ ಆಗುತ್ತ ವಲ್ಲ!" ಎಂದು ರುಸ್ತುಂ ಆಶ್ಚರ್ಯಪಟ್ಟ.

ಪರಿವಾರದವರಿಗೆ ಏನೋ ದಿಗಿಲು, ಏನೋ ಕಳವಳ. ರುಸ್ತುಮನಿಗಾದರೂ ಅಷ್ಟೆ : ತನ್ನ ಕುದುರೆಗಳು ಕಣ್ಮರೆಯಾದವಲ್ಲಾ, ನೆಚ್ಚಿನ ಕರೀಮರ ಮಾಯವಾದನಲ್ಲಾ, ವಿವೇಕಶಾಲಿಯಾದ ಗೋಮೇಧಿಕ ಕಾಣನಲ್ಲಾ—ಎಂದು ಅವನ ಕಳವಳ. ಗೋಮೇಧಿಕನ ಮಾತು ಅಭಿಪ್ರಾಯ ಆವನಿಗೆ ಒಪ್ಪಿಗೆಯಾಗದಿದ್ದರೂ, ಅವನನ್ನು ಕಂಡರೆ ಅಪಾರವಾದ ಪ್ರೀತಿ ಅವನಿಗಿತ್ತು.

ಇನ್ನೇನು, ಸ್ವಲ್ಪ ಕಾಲದಲ್ಲೇ ತನ್ನ ಪ್ರಿಯೆಯಾದ ಕಾಶ್ಮೀರದ ರಾಜಕುಮಾರಿಯ ಪಾದಕಮಲಗಳನ್ನು ತಾನು ಕಾಣುವೆನೆಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿರಬೇಕಾದರೆ - ಒಬ್ಬಾನೊಬ್ಬ ಹಳ್ಳಿಗನು ಒಂದು ದೊಡ್ಡ ದೊಣ್ಣೆಯನ್ನೆತ್ತಿ ಒಂದು ದೊಡ್ಡ ಪಟ್ಟೆಕತ್ತೆಯನ್ನು ಚಚ್ಚುತ್ತಾ ಎದುರಿಗೆ ಬಂದ. ಆ ದೇಶದಲ್ಲಿ ಈ ಪಟ್ಟೆಕತ್ತೆಯಂತೆ ಅಪೂರ್ವವಾದ ಮೃಗ, ಸುಂದರವಾದ ಪ್ರಾಣಿ, ವೇಗಶಾಲಿಯಾದ ಜಂತು ಬೇರೆ ಇಲ್ಲ. ಶಕ್ತಿಯಲ್ಲೂ ಅದರ ಸಮ ಇಲ್ಲ. ಆದೂ ಕೂಡ ಸುಮ್ಮನೆ ಚಚ್ಚಿಸಿಕೊಂಡು ಇರಲಿಲ್ಲ; ಮರವನ್ನು ಬುಡಸಹಿತವಾಗಿ ಕಿತ್ತುರುಳಿಸುವಂಥ ಒದೆಗಳನ್ನು ಆ ಹಳ್ಳಿಗನಿಗೆ ತಾನೂ ಒದಗಿಸುತ್ತಿತ್ತು.

ರುಸ್ತುಂ ಆ ಕತ್ತೆಯ ಪಕ್ಷವಾಗಿ ಮಾತನಾಡಿ, ಹಳ್ಳಿಗನನ್ನು ಗದರಿದ. ಹಳ್ಳಿಗನು ಗೊಣಗುಟ್ಟುತ್ತ "ಇರಲಿ, ಇರಲಿ ನಿನಗೆ ಮಾಡುತ್ತೇನೆ" ಎಂದು ಗೊಣಗುತ್ತ, ಹೊರಟುಹೋದ. ಕತ್ತೆ ತನ್ನನ್ನು ರಕ್ಷಿಸಿದ ರುಸ್ತುಮನಿಗೆ ತನ್ನ ಭಾಷೆಯಲ್ಲಿ ವಂದನೆಗಳನ್ನು ಒಪ್ಪಿಸುತ್ತ, ಹತ್ತಿರ ಬಂತು. ರುಸ್ತುಂ ಬೆನ್ನು ಸವರಿದರೆ, ಅದು ಸಂತೋಷಪಟ್ಟಿತು. ರುಸ್ತುಮನ ಮೈಗೆ ತನ್ನ ಮೈ ಸೋಕಿಸಿತು.

ಊಟವಾದ ಮೇಲೆ, ರುಸ್ತುಂ ಆ ಕತ್ತೆಯನ್ನು ಏರಿ, ತನ್ನ ಪರಿವಾರದೊಡನೆ ಕಾಶ್ಮೀರಕ್ಕೆ ಹೊರಟ. ಕೆಲವರು, ಆನೆಯ ಮೇಲೆ ಹತ್ತಿದರು. ಉಳಿದವರು ಕಾಲುನಡಿಗೆಯಲ್ಲಿ ಹೊರಟರು.

ಅವನು ಆ ಕತ್ತೆಯ ಮೇಲೆ ಕುಳಿತನೋ ಇಲ್ಲವೋ, ಅದು ಕಾಶ್ಮೀರಕ್ಕೆ ಹೋಗುವದರ ಬದಲು ಕಾಬೂಲಿನ ಕಡೆ ಮುಖಮಾಡಿತು. ರುಸ್ತುಂ ಏನೇನೋ ಮಾಡಿದ, ಲಗಾಮು ಹಿಡಿದು ತುಯ್ದ. ಕಾಲಿನಿಂದ

ಒದೆದ, ಕೋಲಿನಿಂದ ಹೊಡೆದ. ಬಾಲವನ್ನು ತಿರಿಚಿದ, ಎಡಕ್ಕೂ ಬಲಕ್ಕೂ ತಿರುಗಿಸಿ ಎಳೆದ. ಏನೇನು ಮಾಡಿದರೂ ಅದು ಕಾಬೂಲಿನ ಕಡೆಗೇ ತಿರುಗುತ್ತಿತ್ತು.

ರುಸ್ತುಮನಿಗೆ ಬೆವರು ಕಡೆಯಿತು, ಆಯಾಸವಾಯಿತು. ಆ ಕತ್ತೆಯನ್ನು ಏನು ಮಾಡುವುದೆಂದು ತಿಳಿಯಲಿಲ್ಲ.

ಆ ವೇಳೆಗೆ ಒಬ್ಬ ವ್ಯಾಪಾರಿ ಒಂದು ಒಂಟೆಯ ಮೇಲೆ ಬಂದ. "ಏನಪ್ಪಾ ಇದು? ನಿನ್ನ ಕತ್ತೆ ನೀನು ಹೇಳಿದ ಹಾಗೆ ಕೇಳುವುದಿಲ್ಲ ವೆಂದು ಕಾಣುತ್ತದಲ್ಲಾ! ಇಂಥ ದುಷ್ಟ ಪ್ರಾಣಿಯನ್ನು, ಬೇಕಾದರೆ ನನಗೆ ಕೊಟ್ಟು. ಇದಕ್ಕೆ ಬದಲಾಗಿ, ನನ್ನ ಈ ಒಂಟೆಗಳಲ್ಲಿ ಯಾವುದಾ ದರೂ ನಾಲ್ಕನ್ನು ಆರಿಸಿಕೊ" ಎಂದ.

ವ್ಯವಹಾರ ಬಹಳ ಚೆನ್ನಾಗಿ ಕುದುರಿತು, ಎಂದು ರುಸ್ತುಂ ತನ್ನ ಭಾಗ್ಯಕ್ಕೆ ತಾನೇ ಸಂತೋಷಪಟ್ಟ.

"ನನ್ನ ಈ ಪ್ರಯಾಣದಿಂದ ಒಳ್ಳೆಯದಾಗುವುದಿಲ್ಲ ಎಂದು ನನ್ನನ್ನು ಹಿಂದಿರುಗಿಸಲು ಪ್ರಯತ್ನಿಸಿದನಲ್ಲವೆ. ಗೋಮೇಧಿಕ! ಈಗ ಅವನು ಇದ್ದು. ನನ್ನ ಅದೃಷ್ಟವನ್ನು ನೋಡಬೇಕಾಗಿತ್ತು!" ಎಂದು ಕೊಂಡ.

ಕತ್ತೆಯನ್ನು ಕೊಟ್ಟು, ನಾಲ್ಕು ಸೊಗಸಾದ ಒಂಟೆಗಳನ್ನು ಆರಿಸಿದ. ಅದರಲ್ಲಿ ಒಂದನ್ನು ಹತ್ತಿದ, ಉಳಿದ ಮೂರನ್ನು ಕರೆದುತರಹೇಳಿದ. ಸ್ವರ್ಗವೇ ಗುರಿಯಾಗಿ, ಸುಖವೇ ದಾರಿಯಾಗಿ, ಇದೆಯೆಂದು ಮುಂದೆ ಹೊರಟ.

ಒಂದು ನಾಲ್ಕು ಕೊಂಬಿನ ಕೂಗು ನಡೆದಿರಬಹುದು....ಅಷ್ಟರಲ್ಲಿ ದಾರಿಗೆ ಒಂದು ಅಡ್ಡಿ ಬಂತು. ಒಂದು ದೊಡ್ಡ ಹೊಳೆ, ತುಂಬು ಪ್ರವಾಹ, ಮರಗಳೂ ಬಂಡೆಗಳೂ ಕೊಚ್ಚಿಕೊಂಡು ಬಂದು ಬಿಳಿನೊರೆ ತುಂಬಿಹೋಗಿದೆ. ಎರಡೂ ದಡದಲ್ಲಿ ಭಯಂಕರವಾದ ಪ್ರಪಾತ; ನೋಡಿದರೆ ಕಣ್ಣು ಕತ್ತಲೆ ಕಟ್ಟುತ್ತದೆ, ರಕ್ತ ಜಿಲ್ಲೆನ್ನುತ್ತದೆ. ಅದನ್ನು ದಾಟುವಹಾಗಿಲ್ಲ. ಎಡಗಡೆಗೆ ದಾರಿಯಿಲ್ಲ. ಬಲಗಡೆಗೂ ಇಲ್ಲ.

"ಏನೋ ಭಯವಾಗುತ್ತಿದೆ. ಗೋಮೇಧಿಕ ಹೇಳಿದ್ದು ಸರಿಯೆಂದು ತೋರುತ್ತಿದೆ. ನಾನು ಅವನ ಮಾತುಕೇಳದಿದ್ದದ್ದು ತಪ್ಪೆನ್ನಿಸುತ್ತಿದೆ.

ಅವನಾದರೂ ಇಲ್ಲಿ ಇದ್ದಿದ್ದರೆ, ನನಗೆ ಏನಾದರೂ ಉಪಾಯ ಕಾಣಿಸು ತ್ತಿದ್ದ. ನನ್ನ ಕರೀಮರನಾದರೂ ಇದ್ದಿದ್ದರೆ, ನನಗೆ ಧೈರ್ಯ ಹೇಳು ತ್ತಿದ್ದ. ಇಲ್ಲಿಂದ ಪಾರಗಾಣಿಸುತ್ತಿದ್ದ. ಇಬ್ಬರಲ್ಲಿ ಒಬ್ಬನಾದರೂ ಇಲ್ಲದ ಹಾಗಾಯಿತೇ!" ಎಂದು ರುಸ್ತುಂ ಪೇಚಾಡಿದ.

ಪರಿವಾರದವರ ಪರದಾಟವನ್ನು ಕಂಡು, ಆವನ ಪರದಾಟ ಅಧಿಕ ವಾಯಿತು. ರಾತ್ರಿಯೋ ಕತ್ತಲೆ. ಗೋಳೋ ಗೋಳು. ಕಟ್ಟಕಡೆಗೆ, ಆಯಾಸವಾಗಿ, ಪ್ಯಾಸೋತು, ಎಲ್ಲರೂ ಕಣ್ಣುಮುಚ್ಚಿ ನಿದ್ರೆಮಾಡಿದರು.

ಬೆಳಗಾಯಿತು ಎದ್ದು, ಕಣ್ಣು ಬಿಟ್ಟು ನೋಡಿದರೆ, ಪ್ರವಾಹದ ಹೊಳೆಯ ಹುಚ್ಚುನೀರಿನ ಮೇಲೆ, ಈಚೆ ದಡದಿಂದ ಆಚೆ ದಡಕ್ಕೆ ಮುಟ್ಟಿ, ದೊಡ್ಡದೊಂದು ಸುಂದರವಾದ ಬಿಳಿ ಶಿಲೆಯ ಸೇತುವೆ!

ಪ್ರಯಾಣಿಕರು ತಮ್ಮ ಕಣ್ಣುನ್ನು ತಾವೇ ನಂಬದಾದರು. "ಇದೇ ನಿದು? ಅದ್ಭುತವೆ? ಇದು ಕನಸೆ? ಇದು ನಿಜವೆ? ಇದನ್ನು ನಂಬಿ ದಾಟಬಹುದೆ?" ಎಂದು ಎಲ್ಲರೂ ಮಂಡಿಯೂರಿ, ದೇವರ ಮಹಿಮೆ ಯನ್ನು ಕೊಂಡಾಡಿದರು. ಸೇತುವೆಯ ಹತ್ತಿರ ಬಂದರು. ಅದನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡರು. ಆಕಾಶದ ಕಡೆಗೆ ಕೈಮುಗಿದರು. ನಡುಗುವ ಹೆಜ್ಜೆಗಳನ್ನು ಒಂದೊಂದಾಗಿ ಇರಿಸಿ, ಮುಂದೆ ಹೋದರು; ಪರಮಾಶ್ಚರ್ಯಪಟ್ಟರು.

ರುಸ್ತುಂ ಅಂದುಕೊಂಡ: "ಖಂಡಿತವಾಗಿಯೂ ದೈವ ನನ್ನ ಪರ ವಾಗಿದೆ. ಗೋಮೋಧಿಕನ ಭೀತಿ ಶುದ್ಧಾಂಗವಾಗಿ ತಪ್ಪು. ದೇವವಾಣಿ ಹೇಳಿದ್ದರ ಅರ್ಥ ಆವನಿಗೆ ತಿಳಿಯದು. ಕರೀಮರನ ಮಾತು ಸತ್ಯ. ಅಯ್ಯೋ, ಅವನು ಇಲ್ಲಿಲ್ಲವಲ್ಲ!"

ರುಸ್ತುಮನೂ ಅವನ ಪರಿವಾರದವರೂ ಈ ದಡವನ್ನು ಬಿಟ್ಟು ಆ ದಡವನ್ನು ಸೇರಿದರೋ ಇಲ್ಲವೋ—ಆ ಸೇತುವೆ ಪಟಪಟನೆ ಮುರಿದು, ದಡಾರನೆ ನೀರಿಗೆ ಬಿದ್ದು, ಮುಳುಗಿತು.

"ಇನ್ನೂ ಅನುಕೂಲವಾಯಿತು! ಮತ್ತೂ ಅನುಕೂಲವಾಯಿತು!" ಎಂದ ರುಸ್ತುಂ. "ದೇವರ ಲೀಲೆ ಅಗಾಧವಾದದ್ದು! ಆತನ ಕರುಣೆ ಅಪಾರವಾದದ್ದು! ನಾನು ಮತ್ತೆ ಕಾಬೂಲಿಗೆ ಹಿಂದಿರುಗುವುದು ಆತನಿಗೆ

ಇಚ್ಛೆಯಿಲ್ಲ. ಕಾಶ್ಮೀರದ ರಾಜಕುಮಾರಿಯನ್ನು ಮದುವೆಯಾಗಬೇಕು ಎಂದೇ ಹೀಗೆಲ್ಲ ನಡೆದಿರಬಹುದು! ಒಳ್ಳೇದು. ನಾನು ಕಾಶ್ಮೀರದ ರಾಜನೇ ಆಗುತ್ತೇನೆ. ಹೀಗೆ ಕಾಂದಹಾರದಲ್ಲಿ ನಾನು ರುಸ್ತುಂ, ಕಾಶ್ಮೀರದಲ್ಲಿ ನಾನು ರಾಜ. ದೇವವಾಣಿಯು 'ನೀನು ರುಸ್ತುಂ ಆದರೂ, ರುಸ್ತುಂ ಆಗಿರುವುದಿಲ್ಲ" ಎಂದುದಕ್ಕೆ ಇದೇ ಅರ್ಥವಿರಬಹುದು. ಹೀಗೆ ದೇವವಾಣಿಯ ಒಂದು ಭಾಗ ನನಗೆ ಅನುಕೂಲವಾಗಿ ನೆರವೇರಿದ ಮೇಲೆ, ಉಳಿದದ್ದೂ ನನಗೆ ಅನುಕೂಲವಾಗಿಯೇ ಏರ್ಪಡಬೇಕು. ಇಂಥ ಶುಭಸಮಯದಲ್ಲಿ ಗೋಮೋಧಿಕ, ಕರೀಮರ ಇಬ್ಬರೂ ಇಲ್ಲವಲ್ಲ! ಗೋಮೋಧಿಕ ಇರದಿದ್ದರೆ ಹೋಗಲಿ; ಕರೀಮನಾದರೂ ಇರಬೇಕಾಗಿತ್ತು" ಎಂದುಕೊಂಡ.

ಚಕಚಕನೆ ಇನ್ನಷ್ಟು ಕೋಂಬಿನ ಕೂಗು ದೂರ ಹೋದರು. ಸಂಜೆ ಆಗುವ ವೇಳೆಗೆ, ಕೋಟೆಗೋಡೆ ಹಾಕಿದ ಹಾಗೆ, ಸುತ್ತ ಎತ್ತ ನೋಡಿದರೂ, ಮೋಡಗಳನ್ನು ಮುಟ್ಟುವ ಮಲೆಗಳ ಸಾಲು ತಲೆಯೆತ್ತಿತ್ತು. ದುರ್ಗಮವಾದ ಆ ಪರ್ವತಗಳನ್ನು ಕಂಡು ನಮ್ಮ ಪ್ರಯಾಣಿಕರು ಭಯದಿಂದ ನಡುಗಿಹೋದರು.

"ನಾವೆಲ್ಲರೂ ಇಲ್ಲೇ ನಾಶವಾಗಬೇಕೆಂಬುದು ದೇವರ ಇಚ್ಛೆ ಇರಬೇಕು! ನಾವು ಹಿಂದಿರುಗುವುದಕ್ಕಿದ್ದ ಒಂದೇ ಉಪಾಯವಾದ ಆ ಸೇತುವೆಯನ್ನು ಆತನು ಬೇಕೆಂದೇ ಮುರಿದಿರಬೇಕು! ನಾವು ಮುಂದಕ್ಕೂ ಹೋಗಲಾರದ ಹಾಗೆ, ಆತನೇ ಈ ಬೆಟ್ಟಗಳ ಕೋಟೆಯನ್ನು ಕಟ್ಟಿರಬೇಕು! ಅಯ್ಯೋ, ರುಸ್ತುಂ! ನಾವು ಕಾಶ್ಮೀರವನ್ನು ಖಂಡಿತ ಕಾಣುವ ಹಾಗಿಲ್ಲ. ನಾವು ನಮ್ಮ ಕಾಂದಹಾರವನ್ನು ಕೂಡ ಮತ್ತೆ ಕಾಣುವ ಹಾಗಿಲ್ಲ!" ಎಂದು ಪರಿವಾರದವರೆಲ್ಲ ಗೋಳಾಡಿದರು.

ರುಸ್ತುಂ ಈ ಹಿಂದೆ ಎಷ್ಟು ಅತ್ಯಧಿಕವಾದ ಆನಂದವನ್ನು ಅನುಭವಿಸಿದನೋ, ಈಗ ಅಷ್ಟೇ ಅತ್ಯಧಿಕವಾದ ವ್ಯಸನಕ್ಕೆ ಒಳಗಾದನು. ದೇವವಾಣಿ ಹೇಳಿದ್ದೆಲ್ಲ ತನಗೆ ಅನುಕೂಲವಾದದ್ದೇ ಎಂಬ ಅವನ ಹಿಗ್ಗು ಇಂಗಿಹೋಯಿತು.

"ಅಯ್ಯೋ, ಗೋಮೇಧಿಕ! ನಿನ್ನ ಬುದ್ಧಿಯ ಮಾತುಗಳನ್ನು ಕೇಳದೆ ಕೆಟ್ಟೆನಲ್ಲಾ! ಆಪ್ತನಾದ ನಿನ್ನನ್ನು ಅನ್ಯಾಯವಾಗಿ ನೀಗಿಕೊಂಡೆನಲ್ಲಾ!" ಎಂದು ಹಂಬಲಿಸಿದ.

ಹೀಗೆ ಪಶ್ಚಾತ್ತಾಪಗೊಂಡು, ನಿಟ್ಟುಸಿರುಬಿಟ್ಟು. ಕಣ್ಣೀರು ಸುರಿಸಿದನೋ ಇಲ್ಲವೋ--ಎದುರಿಗಿದ್ದ ಬೆಟ್ಟದ ಬುಡ ಬಾಯಿ ತೆರೆಯಿತು! ಸಹಸ್ರಾರು ದೀಪಗಳಿಂದ ಬೆಳಗುತ್ತಿದ್ದ ದೊಡ್ಡ ಸಭಾಭವನವೊಂದು ಗೋಚರವಾಯಿತು!

ರುಸ್ತುಂ ಸಂತೋಷದಿಂದ ಜಯಕಾರಮಾಡಿದ. ಪರಿವಾರದವರೆಲ್ಲ ಆಶ್ಚರ್ಯದಿಂದ ಅಡ್ಡಬಿದ್ದು, "ಆಶ್ಚರ್ಯ! ಪವಾಡ! ಮಾಯೆ!" ಎಂದು ರುಸ್ತುಮನ ಭಾಗ್ಯವನ್ನು ಕೊಂಡಾಡಿದರು. "ದೇವರಿಗೆ ಪ್ರೀತಿಪಾತ್ರನಾದವನು ಇವನು! ಅದೃಷ್ಟದ ಮುದ್ದುಮಗು ಇವನು!" ಎಂದರು.

ರುಸ್ತುಂ ಅದೂ ನಿಜವೆಂದು ನಂಬಿದ. ಹಿಗ್ಗಿ ಹೀರೆಯು ಕಾಯಾದ. ಹೊಸ ಹುಮ್ಮಸ್ಸಿನಿಂದ ತುಂಬಿಹೋದ.

"ಅಯ್ಯೋ, ಕರೀಮರನೆ! ಕರೀಮರನೆ!! ಎಲ್ಲಿರುವೆ? ಈ ಅದ್ಭುತಗಳನ್ನೆಲ್ಲ ಕಂಡು ಸಂತೋಷಪಡುವುದಕ್ಕೆ ನೀನೇಕೆ ಇಲ್ಲಿಲ್ಲ? ಅದು ಏನು ಪಾಪಮಾಡಿ, ನಿನ್ನನ್ನು ನಾನು ಕಳೆದುಕೊಂಡೆ? ಸುಂದರಿ, ಕಾಶ್ಮೀರ ರಾಜಕುಮಾರಿ, ನಿನ್ನ ರಮಣೀಯವಾದ ಆಕಾರವನ್ನು ಎಂದು ಕಂಡೇನು?" ಎಂದು ಉದ್ಗಾರ ತೆಗೆದ.

ತನ್ನ ಪರಿವಾರದವರನ್ನೂ ಆನೆಯನ್ನೂ ಒಂಟೆಗಳನ್ನೂ ಕರೆದುಕೊಂಡು, ರುಸ್ತುಂ, ಆ ಬೆಟ್ಟದ ಬಾಯಲ್ಲಿ ಕಂಡ ಸಭೆಗೆ ಪ್ರವೇಶಿಸಿದ. ಅದನ್ನು ದಾಟಿದ. ಅದರ ಆಚೆ ತುದಿಯಲ್ಲಿ ಒಂದು ಹುಲ್ಲುಗಾವಲು, ಮಧ್ಯೆ ಮಧ್ಯೆ ಹೂಗಳು, ಸುತ್ತೂ ಅಂಚಿನಲ್ಲಿ ನೀರಿನ ಕಾಲುವೆಗಳು. ಹುಲ್ಲುಗಾವಲಿನ ಆಚೆ ಸಾಲುಮರಗಳ ತೋಪು, ಕಣ್ಣು ಕಾಣುವವರೆಗೂ. ಆ ತೋಪನ್ನು ದಾಟಿದ ಮೇಲೆ ಒಂದು ನದಿ. ನದಿಯ ದಡದಲ್ಲಿ ಸಾವಿರಾರು 'ವಿಹಾರಗೃಹಗಳು, ಒಂದೊಂದರ ಸುತ್ತಲೂ ಶೃಂಗಾರ ತೋಟಗಳು. ಪ್ರತಿಯೊಂದರಲ್ಲೂ ವಾದ್ಯ, ಪ್ರತಿಯೊಂದರಲ್ಲೂ ಗಾಯನ, ಪ್ರತಿಯೊಂದರಲ್ಲೂ ನೃತ್ಯ.

ರುಸ್ತುಂ ಬೇಗಬೇಗ ಆ ನದಿಯ ಮೇಲಿನ ಒಂದು ಸೇತುವೆಯನ್ನು ದಾಟಿ, ಎದುರಿಗೆ ಸಿಕ್ಕಿದ ಅಪರಿಚಿತನೊಬ್ಬನನ್ನು "ಈ ಸುಂದರವಾದ ದೇಶದ ಹೆಸರು ಏನು?" ಎಂದು ಕೇಳಿದ.

ಆ ಅಪರಿಚಿತ ಹೇಳಿದ:

"ಇದು ಕಾಶ್ಮೀರದ ಪ್ರಾಂತ. ಇಲ್ಲಿನ ನಿವಾಸಿಗಳು ನಿನಗೇ ಕಾಣುವಂತೆ, ಸಂತರ್ಪಣೆ ಮಾಡುತ್ತಿದ್ದಾರೆ, ಸಂತೋಷ ಪಡುತ್ತಿದ್ದಾರೆ. ನಮ್ಮ ರಾಜಕುಮಾರಿಯ ಮದುವೆಯಾಗುವುದೆಂದು ನಾವು ಉತ್ಸವ ಮಾಡುತ್ತಿದ್ದೇವೆ. ಅವಳ ತಂದೆ ಅವಳನ್ನು ಬಬಾಬೂ ಎಂಬವನಿಗೆ ಕೊಡಲು ನಿಶ್ಚಯಿಸಿದ್ದಾನೆ. ದೇವರು ಆ ದಂಪತಿಗಳಿಗೆ ಸಮಸ್ತ ಸುಖಗಳನ್ನು ಸಮೃದ್ಧಿಯಾಗಿ ಒದಗಿಸಲಿ!"

ಆ ಮಾತುಗಳು ಕಿವಿಗೆ ಬೀಳುತ್ತಿದ್ದ ಹಾಗೆಯೇ ರುಸ್ತುಂ ಮೈಮರೆತು ಮೂರ್ಛೆಬಿದ್ದ. ಕಾಶ್ಮೀರದ ಆ ಅಪರಿಚಿತ, "ಇವನಿಗೆ ಏನಾದರೂ ಮೂರ್ಛೆರೋಗ ಇರುವುದೋ ಹೇಗೋ!" ಎಂದುಕೊಂಡು, ಅವನನ್ನು ತನ್ನ ಮನೆಗೆ ಸಾಗಿಸಿಕೊಂಡು ಹೋದ. ಇಬ್ಬರು ಉತ್ತಮರಾದ ವೈದ್ಯರನ್ನು ಕರೆಸಿದ.

ಬಹು ಹೊತ್ತಾದರೂ ರುಸ್ತುಮನಿಗೆ ಪ್ರಜ್ಞೆ ಬರಲಿಲ್ಲವಾದರೂ, ಕ್ರಮಕ್ರಮವಾಗಿ ಚೇತರಿಸಿಕೊಂಡ; ಕಣ್ಣು ಹೊರಳಿಸಿ, ಮೂರು ನಾಲ್ಕು ಬಾರಿ "ಗೋಮೇಧಿಕ! ಗೋಮೇಧಿಕ! ನಿನ್ನ ಮಾತು ನಿಜ!" ಎಂದು ಕವರಿಸಿಕೊಂಡ.

ವೈದ್ಯರಲ್ಲಿ ಒಬ್ಬ ಆ ಕಾಶ್ಮೀರದ ಅಪರಿಚಿತನಿಗೆ ಹೇಳಿದ:

"ಈ ಯುವಕನ ಉಚ್ಚಾರಣೆಯನ್ನು ಕೇಳಿದರೆ, ಇವನು ಕಾಂದಹಾರದಿಂದ ಬಂದ ಹಾಗಿದೆ. ಈ ದೇಶದ ಹವಾ ಇವನಿಗೆ ಒಗ್ಗಿಲ್ಲ. ಇವನನ್ನು ಆದಷ್ಟು ಬೇಗ ಇವನ ದೇಶಕ್ಕೆ ಕಳಿಸಿಕೊಡಬೇಕು. ಇವನ ಕಣ್ಣುಗಳಲ್ಲಿ ಉನ್ಮಾದ ಕಾಣುತ್ತಿದೆ. ಇವನನ್ನು ನನಗೆ ಒಪ್ಪಿಸಿದರೆ, ನಾನೇ ಇವನನ್ನು ಇವನ ದೇಶಕ್ಕೆ ಕರೆದುಕೊಂಡು ಹೋಗಿ, ವಾಸಿ ಮಾಡಿ ಬರುತ್ತೇನೆ."

ಇನ್ನೊಬ್ಬ ವೈದ್ಯ ಹೇಳಿದ:

"ಇವನಿಗೆ ಬೇರೆ ಏನೂ ವ್ಯಾಧಿಯಿಲ್ಲ. ವ್ಯಸನದಿಂದ ನರಳುತ್ತಿದ್ದಾನೆ, ಅಷ್ಟೆ. ರಾಜಕುಮಾರಿಯ ಮದುವೆಗೆ ಕರೆದುಕೊಂಡು ಹೋಗಿ, ನಾಲ್ಕು ಹೆಜ್ಜೆ ನರ್ತನ ಮಾಡಿಸಿದರೆ, ಈ ರೋಗ ಪರಿಹಾರವಾಗುತ್ತದೆ."

ಅವರಿಬ್ಬರೂ ಹೀಗೆ ಚರ್ಚೆಮಾಡುತ್ತಿರಬೇಕಾದರೆ, ರುಸ್ತುಂ ಸಾಕಷ್ಟು ಶಕ್ತಿ ಕೂಡಿಸಿಕೊಂಡು, ಎದ್ದು ಕುಳಿತ. ವೈದ್ಯರಿಬ್ಬರ ಅಗತ್ಯ ಇನ್ನು ಇಲ್ಲವೆಂದು ಅವರನ್ನು ಕಳಿಸಿದ್ದಾಯಿತು. ರುಸ್ತುಂ ತನ್ನನ್ನು ಕರೆತಂದ ಗೃಹಸ್ಥನ ಜೊತೆಯಲ್ಲಿ ಏಕಾಂತವಾಗಿ ಹೀಗೆ ಹೇಳಿದ:

"ನಿಮ್ಮ ಎದುರಿಗೆ ಮೈಮರೆತು ಬಿದ್ದುದಕ್ಕೆ ಕ್ಷಮಿಸಬೇಕು, ಸ್ವಾಮಿ. ಹಾಗೆ ಮಾಡಬಾರದಾಗಿತ್ತು. ತಾವು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಈ ನನ್ನ ಆನೆಯನ್ನು ಅಲ್ಪವಾದ ಪ್ರತ್ಯುಪಕಾರವೆಂದು ಸ್ವೀಕರಿಸಬೇಕು."

ಎಂದು, ರುಸ್ತುಂ, ತನಗೆ ದಾರಿಯಲ್ಲಿ ಸಂಭವಿಸಿದ್ದನ್ನೆಲ್ಲಾ ವಿವರ ವಿವರವಾಗಿ ತಿಳಿಯಪಡಿಸಿದ. ಆದರೆ, ತಾನು ಕಾಂದಹಾರದಿಂದ ಕಾಶ್ಮೀರಕ್ಕೆ ಹೊರಟುಬಂದದ್ದು ಏಕೆಂಬುದನ್ನು ಮಾತ್ರ ಹೇಳಲಿಲ್ಲ.

"ನಿಮ್ಮ ಕಾಶ್ಮೀರದ ರಾಜಕುಮಾರಿಯ ಕೈ ಹಿಡಿಯುವ ಈ ಪುಣ್ಯವಂತ, ಬಬಾಬೂ ಎಂಬವನು ಯಾರು? ದಯಮಾಡಿ ತಿಳಿಸುವಿರಾ? ದೊರೆಯು ಇವನನ್ನು ಅಳಿಯನನ್ನಾಗಿ ಆರಿಸಿಕೊಂಡದ್ದು ಏಕೆ? ರಾಜಕುಮಾರಿ ಅದು ಹೇಗೆ ಇವನನ್ನು ಪತಿಯನ್ನಾಗಿ ಒಪ್ಪಿಕೊಂಡಳು?" ಎಂದು ರುಸ್ತುಂ ಕೇಳಿದ.

ಅದಕ್ಕೆ ಆ ಗೃಹಸ್ಥ "ಅಪ್ಪಾ, ರಾಜಕುಮಾರಿ ಈ ಬಬಾಬುವನ್ನು ಮದುವೆಯಾಗಲು ಸರ್ವಥಾ ಒಪ್ಪಿಲ್ಲ. ಊರಿಗೆ ಊರೇ ಅವಳಿಗೆ ಮದುವೆ ಎಂದು ಹಿಗ್ಗಿ ಹಾಡುತ್ತಿದ್ದರೂ, ಅವಳು ಮಾತ್ರ ಕಣ್ಣೀರು ಸುರಿಸುತ್ತಿದ್ದಾಳೆ. ಅರಮನೆಯ ತುದಿಯ ಉಪ್ಪರಿಗೆಯಲ್ಲಿ, ಬಾಗಿಲು ಹಾಕಿಕೊಂಡು, ಈ ಎಲ್ಲ ಸಂಭ್ರಮ ಬೇಡವೋ ಎಂದು ಹಠ ಹಿಡಿದಿದ್ದಾಳೆ" ಎಂದ.

ಆ ಮಾತುಗಳನ್ನು ಕೇಳಿ, ರುಸ್ತುಮನ ಹೋಗಿದ್ದ ಜೀವ ಮತ್ತೆ ಚೇತನಗೊಂಡಿತು. ಕಳವಳದಿಂದ ಬಿಳಿಚಿಹೋಗಿದ್ದ ಮುಖದಲ್ಲಿ ಮತ್ತೆ ರಕ್ತ ತುಂಬಿಕೊಂಡಿತು ಮುಖ ಗೆಲುವಾಯಿತು.

"ಹೇಳಿ, ನಿಮ್ಮ ದಮ್ಮಯ್ಯ. ಮನಸ್ಸಿಲ್ಲದ ಈ ಮಗಳನ್ನು ಈ ಬಬಾಬೂವಿಗೆ ಮದುವೆ ಮಾಡಿಕೊಡಬೇಕೆಂದು ಈ ಕಾಶ್ಮೀರದ ರಾಜನಿಗೆ ಏಕೆ ಇಷ್ಟು ಒರಟು ಹಠ?" ಎಂದು ಕೇಳಿದ.

ಅದಕ್ಕೆ ಆ ಗೃಹಸ್ಥ "ಇದು ಸಂಗತಿ; ಏನೆಂದರೆ, ನಮ್ಮ ಮಹಾರಾಜನು ಒಂದು ದೊಡ್ಡ ವಜ್ರವನ್ನೂ ಒಂದು ಅಮೂಲ್ಯವಾದ ಭರ್ಜಿಯನ್ನೂ ಕಳೆದುಕೊಂಡಿದ್ದಾನೆ ಎಂಬುದು ನಿನಗೆ ಗೊತ್ತೊ?" ಎಂದು ಕೇಳಿದ.

"ಓಹೋ, ಹೌದು. ಅದು ನನಗೆ ಚೆನ್ನಾಗಿ ಗೊತ್ತು."

"ಹಾಗಾದರೆ, ಕೇಳು: ಈ ನಮ್ಮ ದೊರೆ, ಆ ಎರಡು ಅನರ್ಘವಾದುವನ್ನು ಕಳೆದುಕೊಂಡು ಕೊರಗು ಹಿಡಿದವನು. ಅವುಗಳಿಗಾಗಿ ಪ್ರಪಂಚದ ಮೂಲೆಮೂಲೆಗಳಲ್ಲೂ ಹುಡುಕಿಸಿ, ಕಡೆಗೆ 'ಇವುಗಳಲ್ಲಿ ಯಾವುದಾದರೂ ಒಂದನ್ನಾದರೂ ತಂದುಕೊಡುವವನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಿಕೊಡುತ್ತೇನೆ' ಎಂದು ವಾಗ್ದಾನ ಮಾಡಿದ. ಅದಕ್ಕೆ ಉತ್ತರವಾಗಿ, ಈ ಬಬಾಬೂ ಎಂಬವನು ತನ್ನ ಬಳಿಯಿದ್ದ ವಜ್ರವನ್ನು ತಂದು ಒಪ್ಪಿಸಿದ. ಈಗ ಅರಸನ ವಾಗ್ದಾನದಂತೆ ಅವನಿಗೆ ರಾಜಕುಮಾರಿಯನ್ನು ಕೊಟ್ಟು ನಾಳೆ ಮದುವೆ ಆಗಬೇಕು."

ರುಸ್ತುಮನ ಮುಖ ವಿವರ್ಣವಾಯಿತು. ಏನೋ ಒಂದೆರಡು ಮಾತು ತೊದಲಿ, ತನಗೆ ಆತಿಥ್ಯ ಕೊಟ್ಟವನಿಗೆ ಕೈಮುಗಿದು, ಬೀಳ್ಕೊಂಡನು. ಕೂಡಲೆ ಒಂಟೆಯನ್ನು ಹತ್ತಿ ವೇಗವಾಗಿ ನಗರದ ಕಡೆಗೆ ದೌಡಾಯಿಸಿದನು. ಅಲ್ಲಿ ಶುಭಪ್ರಸ್ತಕ್ಕೆ ಎಲ್ಲಾ ಸಿದ್ಧತೆಗಳೂ ಆಗುತ್ತಿದ್ದುವು. ರಾಜನ ಅರಮನೆಯ ಹತ್ತಿರ ಬಂದು, "ಅತ್ಯಗತ್ಯದ ಕೆಲಸವಿದೆ. ಅರಸನನ್ನು ಕೂಡಲೆ ಕಾಣಬೇಕು" ಎಂದು ಕೇಳಿಕೊಂಡ.

"ಅರಸನು ಮದುವೆಯ ಸಿದ್ಧತೆಗಳಲ್ಲಿ ಮಗ್ನನಾಗಿದ್ದಾನೆ. ಈಗ ಕಾಣುವುದಕ್ಕೂ ಕೇಳುವುದಕ್ಕೂ ಸಮಯವಲ್ಲ" ಎಂದು ಉತ್ತರ ಬಂತು.

"ಅದೇ, ಆ ಮದುವೆಯ ವಿಷಯವಾಗಿಯೇ ನಾನೂ ಅರಸನೊಡನೆ ಮಾತನಾಡಬೇಕಾಗಿರುವುದು" ಎಂದು ಮತ್ತೆ ಹೇಳಿಕಳಿಸಿದ.

ಅವನ ಒತ್ತಾಯವನ್ನೂ ಆತುರವನ್ನೂ ಕಂಡು, ಒಳಗೆ ಬಿಟ್ಟರು

"ಮಹಾಸ್ವಾಮಿ, ತಮ್ಮ ವೈಭವ ಹೀಗೇ ವೃದ್ಧಿಯಾಗುತ್ತಿರಲಿ, ತಮ್ಮ ರಾಜತನ ರಾರಾಜಿಸುತ್ತಿರಲಿ. ತಮ್ಮ ಅಳಿಯನಾಗುವವನು, ಮಹಾಸ್ವಾಮಿ, ಮಹಾ ಮೋಸಗಾರ!"

"ಏನೆಂದೆ? ಮೋಸಗಾರನೆ! ಹಾಗೆನ್ನಲು ಎಷ್ಟು ಧೈರ್ಯವೋ ನಿನಗೆ? ಕಾಶ್ಮೀರದ ಮಹಾರಾಜನು ತನ್ನ ಅಳಿಯನನ್ನಾಗಿ ಆರಿಸಿಕೊಂಡಿರುವವನನ್ನು ಹಾಗೆಲ್ಲಾ ಹಗುರವಾಗಿ ಆಡುವುದು ಯುಕ್ತವಲ್ಲ."

"ಹೌದು, ಮಹಾಸ್ವಾಮಿ- ಅವನು ಮೋಸಗಾರನೇ. ಅದಕ್ಕೆ ಸಾಕ್ಷಿ ಬೇಕಾದರೆ, ಇದೋ. ಇಲ್ಲಿದೆ; ನಾನು ತಂದಿರುವ ಈ ನಿಮ್ಮ ಕಳೆದುಹೋಗಿದ್ದ ವಜ್ರ!"

ರಾಜನ ಆಶ್ಚರ್ಯ ಹೇಳತೀರದು. ಬಬಾಬೂ ತಂದುಕೊಟ್ಟಿದ್ದ ವಜ್ರವನ್ನೂ ಈಗ ಇವನು ಕೊಟ್ಟುದನ್ನೂ ಹೋಲಿಸಿ ನೋಡಿದ. ಆದರೆ ವಜ್ರಗಳ ಪರೀಕ್ಷೆ ಅವನಿಗೆ ಅಷ್ಟೇನೂ ಗೊತ್ತಿಲ್ಲದಿದ್ದ ಕಾರಣ, ಯಾವುದು ಸಾಚಾ, ಯಾವುದು ಖೋಟಾ ಎಂದು ಅವನಿಗೆ ಗೊತ್ತಾಗಲಿಲ್ಲ.

"ಏನು ಮಾಡೋಣ, ಈಗ? ಎರಡು ವಜ್ರ ಬಂದಿವೆ. ನನಗೆ ಇರುವವಳು ಒಬ್ಬಳೇ ಮಗಳು. ಏನು ಮಾಡೋಣ?" ಎಂದು ರಾಜ ಪೇಚಾಡಿಹೋದ.

ರಾಜ ಬಬಾಬೂವಿಗೆ ಹೇಳಿ ಕಳಿಸಿದ. "ಹೀಗೆ ಮೋಸ ಮಾಡಬಹುದೆ?" ಎಂದು ಆಕ್ಷೇಪಿಸಿದ. ಬಬಾಬೂ ಆಣೆಯಿಟ್ಟುಕೊಂಡ: "ನನ್ನ ಕಣ್ಣಾಣೆಗೂ ನಾನು ಬೆಲೆ ಕೊಟ್ಟು ಇದನ್ನು ಕೊಂಡುಕೊಂಡೆ."

ಅವನು ಇನ್ನೊಬ್ಬ ತನಗೆ ತನ್ನ ವಜ್ರ ಎಲ್ಲಿಂದ ಬಂತು ಎಂದು ಹೇಳಲಿಲ್ಲ. "ಇದಕ್ಕೆ ಉಪಾಯ ಮಾಡೋಣ. ನಾವಿಬ್ಬರೂ ಒಬ್ಬೊಂಟಿಯಾಗಿ ಕಾಳಗ ಮಾಡೋಣ. ಗೆದ್ದವರಿಗೆ ರಾಜಕುಮಾರಿ ಹೂಮಾಲೆ ಹಾಕಲಿ" ಎಂದು ರಾಜನನ್ನು ಕುರಿತು. "ಮಹಾರಾಜ, ನಿನಗೆ ಅಳಿಯನಾಗುವವನು ವಜ್ರವನ್ನು ತಂದುಕೊಟ್ಟರೆ ಸಾಕೆ? ಅವನು ತನ್ನ ವೀರತ್ವಕ್ಕೂ ದೃಷ್ಟಾಂತ ಕೊಡಬೇಕು. ಯಾವನು ಇನ್ನೊಬ್ಬನನ್ನು ಕೊಲ್ಲುತ್ತಾನೋ ಅವನು ರಾಜಕುಮಾರಿಯನ್ನು ಮದುವೆ ಆಗುವುದೆಂಬ ಏರ್ಪಾಡು ಸರ್ವಸಮರ್ಪಕವಲ್ಲವೆ?" ಎಂದನು.

ರಾಜನು "ಅದೂ ಒಳ್ಳೆಯದೆ. ಆಸ್ಥಾನಕ್ಕೆ ಒಂದು ನೋಟವನ್ನು ಒದಗಿಸಿದ ಹಾಗಾಯಿತು. ಸರಿ, ಇನ್ನು ತಡವೇಕೆ? ಈಗಲೆ ಸಿದ್ಧವಾಗಿರಿ. ಗೆದ್ದವರು ಸೋತವರ ಕವಚವನ್ನು ಕಾಶ್ಮೀರದ ಪದ್ಧತಿಯಂತೆ ಎತ್ತಿ ಧರಿಸಿಕೊಳ್ಳುವುದು ಮಾತ್ರವಲ್ಲದೆ, ಅವರೇ ನನ್ನ ಮಗಳನ್ನೂ ಮದುವೆಯಾಗಲಿ" ಎಂದನು.

ರಾಜಕುಮಾರಿಯ ಕೈಗೆ ಹಕ್ಕುದಾರರಾದವರಿಬ್ಬರೂ ಅರಮನೆಯ ಮುಂದಿನ ಅಂಗಳಕ್ಕೆ ಬಂದು ಇಳಿದರು. ಮೆಟ್ಟಲಿನ ಮೇಲುತುದಿಯಲ್ಲಿ ಒಂದು ಕಾಗೆ ಕುಳಿತಿತ್ತು. ಒಂದು ಕೆಂಬೂತ ಕುಳಿತಿತ್ತು. "ಹೊಡಿ! ಕಡಿ! ಬಡಿ!" ಎಂದು ಕೂಗಿತು ಕಾಗೆ. "ಬೇಡ! ಬೇಡ! ಬೇಡ!" ಎಂದು ಕೂಗಿತು ಕೆಂಬೂತ. ಆ ಎರಡು ಕೂಗು ಕೇಳಿ, ರಾಜನಿಗೆ ನಗು ಬಂತು. ರುಸ್ತುಮನಾಗಲಿ ಬಬಾಬೂ ಆಗಲಿ ಅದನ್ನು ಗಮನಿಸಲೂ ಇಲ್ಲ. ಕಾಳಗಕ್ಕೆ ಅವರು ಸಿದ್ಧರಾದರು; ಆಸ್ಥಾನದವರೆಲ್ಲ ಸುತ್ತ ಗುಂಪು ಕಟ್ಟಿ ನಿಂತರು.

ರಾಜಕುಮಾರಿ, ಇನ್ನೂ ತನ್ನ ಕೋಣೆಯಲ್ಲಿಯೇ ಬಾಗಿಲು ಮುಚ್ಚಿಕೊಂಡು ಅಡಗಿದ್ದಳು. ಕಾಳಗವನ್ನು ನೋಡಲು ಇಷ್ಟಪಡಲಿಲ್ಲ. ತನ್ನ ಪ್ರಿಯನು ಕಾಶ್ಮೀರಕ್ಕೆ ಬಂದಿದ್ದಾನೆ ಎಂಬ ಶಂಕೆ ಕೂಡ ಅವಳಿಗೆ ಕಿಂಚಿತ್ತೂ ಇರಲಿಲ್ಲ. ಬಬಾಬೂವನ್ನು ಕಂಡರೆ ಅವಳಿಗೇನೋ ಅಸಹ್ಯ, ಏನೋ ಭೀತಿ. ಆದ್ದರಿಂದ ಏನೂ ನೋಡುವುದಿಲ್ಲವೆಂದು ಮನಸ್ಸು ಗಟ್ಟಿ ಮಾಡಿಕೊಂಡಿದ್ದಳು.

ಕಾಳಗ ನಡೆದುಹೋಯಿತು. ಚೆನ್ನಾಗಿಯೇ ನಡೆಯಿತು ಬಬಾಬೂ ಅಲ್ಲೇ ಹತನಾಗಿಹೋದ. ಜನಗಳ ಹಿಗ್ಗು ಅಂತೂ ಹಿಡಿಸತೀರದು. ಏಕೆಂದರೆ, ಸತ್ತ ಅವನು ಅಷ್ಟಾವಕ್ರ; ಗೆದ್ದ ರುಸ್ತುಂ ಮಾತ್ರ ರೂಪದಲ್ಲೂ ರುಸ್ತುಮ್ಮೇ ಆಗಿದ್ದ. ಇಂಥ ಸಂದರ್ಭದಲ್ಲಿ ಕುರೂಪಿ ಸತ್ತರೆ, ಸುರೂಪಿ ಬದುಕಿದರೆ, ನೋಡುವವರಿಗೆ ಏನೋ ತೃಪ್ತಿ.

ಜಯಶಾಲಿಯಾದ ರುಸ್ತುಂ, ಕಾಶ್ಮೀರದ ಕಾಳಗದ ಪದ್ಧತಿಯ ಮೇರೆ, ಸೋತವನ ಕವಚವನ್ನೂ, ಕೊರಳಿನ ವಸ್ತ್ರವನ್ನೂ, ತಲೆಯ ಟೊಪ್ಪಿಗೆಯನ್ನೂ ತಾನು ಧರಿಸಿಕೊಂಡು, ತನ್ನನ್ನು ಹಿಂಬಾಲಿಸಿದ

ಅರಮನೆಯ ಪರಿವಾರದ ನಡುವೆ, ರಾಜಕುಮಾರಿಯಿದ್ದ ಉಪ್ಪರಿಗೆಯ ಕೆಳಗಿನ ಕಿಟಕಿಗಳ ಬಳಿಗೆ ಬಂದನು.

ಜೊತೆಯ ಪರಿವಾರವೆಲ್ಲ ಒಂದೇ ಕೊರಳಿನಿಂದ "ಸುಂದರಿ! ರಾಜಕುಮಾರಿ! ಬಾ! ನಿನ್ನ ಸುಂದರನಾದ ಪತಿಯನ್ನು ನೋಡು ಬಾ! ಎದುರಾಳಿಯನ್ನು ಹೇಗೆ ಸಂಹರಿಸಿದ್ದಾನೆ, ನೋಡು ಬಾ!" ಎಂದು ಕೂಗು ಹಾಕಿದರು.

ಒಳಗಿದ್ದ ಪರಿವಾರದ ಸತಿಯರು ಕೂಡ ಅದೇ ಮಾತನ್ನು ಮೇಲಿಂದ ಮೇಲೆ ಹೇಳಲು, ರಾಜಕುಮಾರಿ ಗ್ರಹಚಾರ ತಪ್ಪಿ, ಕಿಟಕಿಯಿಂದ ತಲೆ ಆಚೆ ಹಾಕಿ ನೋಡಿದಳು. ಎದುರಿಗೆ, ತನಗೆ ಕಂಡರಾಗದೆ ಇದ್ದ ಆ ಅಸಿಷ್ಟ ಬಬಾಬೂವಿನ ಕವಚ, ಕೊರಳ ವಸ್ತ್ರ, ತಲೆಯ ಟೊಪ್ಪಿಗೆಗಳನ್ನು ಕಂಡಳೋ ಇಲ್ಲವೋ—ಸ್ಥೈರಣೆ ಕೆಟ್ಟು, ತನ್ನ ಕೊಠಡಿಯಲ್ಲಿಟ್ಟಿದ್ದ ಚೀನಾ ಪೆಟ್ಟಿಗೆಯ ಹತ್ತಿರ ಓಡಿ, ಅದರೊಳಗೆ ಬಚ್ಚಿಟ್ಟಿದ್ದ ಭರ್ಜಿಯನ್ನು ಕೈಗೆತ್ತಿಕೊಂಡಳು. ಅದು ಅವಳ ಕೈಯಿಂದ ಹಾರಿ, ರುಸ್ತುಮನ ಕಬ್ಬಿಣದ ಕವಚವನ್ನೂ ಭೇದಿಸಿಕೊಂಡು, ಅವನ ಎದೆಯನ್ನು ಇರಿಯಿತು. ಅವನು ನೋವಿನಿಂದ ಹೋ! ಎಂದು ಕಿರಿಚಿಕೊಂಡು, ಕೆಳಗೆ ಬಿದ್ದ. ರಾಜಕುಮಾರಿಗೆ, ಆ ಶಬ್ದವನ್ನು ಕೇಳಿ, ತನ್ನ ಪ್ರಿಯನ ಧ್ವನಿಯನ್ನು ಕೇಳಿದಹಾಗಾಯಿತು.

ದಡದಡನೆ ಕೆಳಗಿಳಿದು ಓಡಿಬಂದಳು. ತಲೆಕೂದಲು ಕೆದರಿ ಹೋಗಿ, ಬೆನ್ನಮೇಲೆ ಬಿದ್ದಿತ್ತು. ಅವಳ ಕಣ್ಣಿನಲ್ಲೂ ಅವಳ ಹೃದಯದಲ್ಲೂ ಏನೋ ಹೇಳಲಾಗದ ಭೀತಿ. ರುಸ್ತುಂ ಕೆಳಗೆ ಬಿದ್ದಿದ್ದ. ಮೈತುಂಬ ರಕ್ತ–ಅವನನ್ನು ಕಂಡಳು––ಒಂದೇ ಕ್ಷಣ! ಅವನ ಮುಖವನ್ನು ಗುರುತಿಸಿದ ಕೂಡಲೆ ಅವಳಿಗಾದ ನೋವು, ಭೀತಿ, ಘೋರಭಾವ, ಇವುಗಳನ್ನೆಲ್ಲಾ ಮಾತು ಏನೆಂದು ವರ್ಣಿಸೀತು! ದುಃಖದ ಭಾರದಿಂದ ಕುಸಿದು ಅವನ ಮೇಲೆ ಬಿದ್ದವಳೇ, ಅವನನ್ನು ತೋಳುಗಳಲ್ಲಿ ತೆಗೆದಪ್ಪಿಕೊಂಡು:

"ಇದೋ! ನಾನೇ ನಿನ್ನ ಪ್ರಾಣಪ್ರಿಯೆ! ನಾನೇ ನಿನ್ನ ಪ್ರಾಣಘಾತಕಿ! ಇದೋ ನಿನಗೆ ನನ್ನ ಕಡೆಯ ಮುತ್ತು!" ಎಂದಳು.

ಅವನ ಎದೆಯಿಂದ ಆ ಭರ್ಜಿಯನ್ನು ಹೊರಗೆಳೆದಳು. ತನ್ನ ಎದೆಗೆ ಅದನ್ನು ತಿವಿದುಕೊಂಡು, ತನ್ನ ಪ್ರಿಯನ ದೇಹದಮೇಲೆ ಪ್ರಾಣ ತ್ಯಾಗಮಾಡಿದಳು.

ಅವಳ ತಂದೆ ವಿಸ್ಮಯಗೊಂಡು, ಅಧೀರನಾಗಿ ನೋಡುತ್ತಾನೆ! ಮಗಳಿಗಾಗಿ ತನ್ನ ಜೀವವನ್ನು ತೆರುವುದಕ್ಕೂ ಅವನು ಸಿದ್ಧ! ಸಾಧ್ಯವಾದರೆ, ಅವಳನ್ನು ಬದುಕಿಸಿಕೊಳ್ಳುವುದಕ್ಕಾಗಿ ಏನು ಬೇಕಾದರೂ ಕೊಟ್ಟಾನು. ಆದರೆ ಅವಳ ಕತೆ ಮುಗಿದಿದೆ. ಆ ಅನಾಹುತಕ್ಕೆಲ್ಲ ಕಾರಣವಾದ ಆ ಭರ್ಜಿಯನ್ನು ಎಳೆದುಕೊಂಡು, ಅದನ್ನು ಚೂರು ಚೂರುಮಾಡಿ ಹಾಕಿದ. ತನಗೆ ಇಷ್ಟೆಲ್ಲಾ ಕೇಡುತಂದ ಆ ಎರಡು ವಜ್ರಗಳನ್ನೂ ದೂರ ಎಸೆದ. ಮಗಳ ಮದುವೆಗೆಂದು ಆಗಿದ್ದ ಸಿದ್ಧತೆಗಳೆಲ್ಲಾ ಮಗಳ ಅಂತಿಮಯಾತ್ರೆಗೆ ಆಯಿತು. ಅರಸ ಅವನನ್ನು ತನ್ನ ಅರಮನೆಗೆ ಎತ್ತಿಸಿಕೊಂಡು ಹೋದ.

ರುಸ್ತುಮನಿಗೆ ಸ್ವಲ್ಪ ಪ್ರಜ್ಞೆ ಬಂದು, ಅವನು ಕಣ್ಣು ಬಿಟ್ಟಾಗ ಅವನ ಕಣ್ಣಿಗೆ ಮೊದಲು ಬಿದ್ದದ್ದು—ತನ್ನ ಮೃತ್ಯುಶಯ್ಯೆಯ ಈಚೆ ಪಕ್ಕದಲ್ಲಿ ಕುಳಿತ ಗೋಮೇಧಿಕ, ಆಚೆ ಪಕ್ಕದಲ್ಲಿ ಕುಳಿತ ಕರೀಮರ. ಅವರನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಅದರಿಂದಲೇ ಸ್ವಲ್ಪ ಚೈತನ್ಯವೂ ಕೂಡಿಬಂತು.

"ಎಲಾ, ಎಷ್ಟು ಕ್ರೌರ್ಯ ನಿಮ್ಮಿಬ್ಬರದೂ! ನನ್ನನ್ನು ಏಕೆ ತೊರೆದು ಹೋದಿರಿ? ನೀವು ಈ ರುಸ್ತುಮನ ಹತ್ತಿರಲೇ ಇದ್ದಿದ್ದರೆ, ಬಹುಶಃ ಈ ರಾಜಕುಮಾರಿ ಇನ್ನೂ ಬದುಕಿಯೇ ಇರುತಿದ್ದಳೋ ಹೇಗೋ!" ಎಂದ.

"ನಾನು ಒಂದು ಕ್ಷಣವಾದರೂ ನಿನ್ನ ಪಕ್ಕವನ್ನು ಬಿಟ್ಟು ಅಗಲಲಿಲ್ಲ" ಎಂದ, ಗೋಮೇಧಿಕ.

"ನಾನಂತೂ ಸದಾ ನಿನ್ನ ಪಕ್ಕದಲ್ಲೇ ಇದ್ದಿದ್ದೇನೆ" ಎಂದ, ಕರೀಮರ.

"ಸುಳ್ಳೇಕೆ ಹೇಳುತ್ತೀರಿ? ಈ ಕಡೆಗಾಲದಲ್ಲಿ ನನ್ನನ್ನು ಏಕೆ ಅಣಕಿಸುತ್ತೀರಿ?" ಎಂದು ರುಸ್ತುಂ ನಿಶ್ಶಕ್ತಿಯಿಂದ ಕೇಳಿದ.

ಅದಕ್ಕೆ ಗೋವೋಧಿಕ ಹೇಳಿದ : "ನಾನು ಹೇಳುವುದನ್ನು ನೀನು ನಂಬಬಹುದು. ಈ ಪ್ರಯಾಣ ಬೇಡ ಎಂದು ನಾನು ಮೊದಲೇ ಹೇಳಿದೆ. ಇದರಿಂದ ಸಂಭವಿಸುವ ಅನಾಹುತ ನನಗೆ ಆಗಲೇ ಗೊತ್ತಿತ್ತು. ಆ ಹದ್ದಿನೊಡನೆ ಹೊಡೆದಾಡಿ, ಅದರ ರೆಕ್ಕೆ ಪುಕ್ಕಗಳನ್ನು ಕಿತ್ತು ಹಾಕಿದ ಗಿಡಗ ನಾನೇ ; ನೀನು ಊರಿಗೆ ಹಿಂದಿರುಗಬೇಕೆಂಬ ಉದ್ದೇಶ ದಿಂದ, ನಿನ್ನ ಸಾಮಾನುಗಳನ್ನೆಲ್ಲ ಬೆನ್ನಮೇಲೆ ಎತ್ತಿಕೊಂಡು ಓಡಿ ಹೋದ ಆನೆಯೂ ನಾನೆ ; ನಿನ್ನ ಇಷ್ಟಕ್ಕೆ ವಿರುದ್ಧವಾಗಿ ನಿನ್ನನ್ನು ನಿನ್ನ ತಂದೆಯ ಮನೆಗೆ ಒಯ್ಯುವುದಕ್ಕೆ ಪ್ರಯತ್ನಿಸಿದ ಪಟ್ಟೆಬಣ್ಣದ ಕತ್ತೆಯೂ ನಾನೇ; ನಿನ್ನ ಕುದುರೆಗಳಿಗೆ ದಾರಿ ತಪ್ಪಿಸಿದವನೂ ನಾನೇ ; ನಿನ್ನ ದಾರಿಗೆ ಅಡ್ಡಲಾಗಿ ಆ ಪ್ರವಾಹವನ್ನು ಸೃಷ್ಟಿಸಿದವನೂ ನಾನೇ ; ನಿನ್ನ ಹಾದಿಗೆ ಎದುರಾಗಿ ಆ ದೊಡ್ಡ ಪರ್ವತಪಂಕ್ತಿಯನ್ನು ನಿರ್ಮಿಸಿದವನೂ ನಾನೇ ; ನೀನು ನಿನ್ನ ತಾಯಿನಾಡಿಗೆ ಹಿಂದಿರುಗಬೇಕೆಂದು ಸಲಹೆ ಕೊಟ್ಟ ವೈದ್ಯನೂ ನಾನೇ ; ಕಾಳಗದ ದಿವಸ, 'ಬೇಡ, ಬೇಡ' ಎಂದು ನಿಷೇಧಿಸುತ್ತ ಕೂಗಿದ ಕೆಂಬೂತವೂ ನಾನೇ—"

ಅದಕ್ಕೆ ಕರೀಮುರ ಹೇಳಿದ : "ಗಿಡಗನ ಗರಿಗರಿಗಳನ್ನು ಕಿತ್ತುಹಾಕಿದ ಹದ್ದು ನಾನು. ಆನೆಯನ್ನು ನೂರು ಸಲ ಕೊಂಬಿನಿಂದ ತಿವಿದ ಖಡ್ಗ ಮೃಗ ನಾನೇ. ಪಟ್ಟೆಬಣ್ಣದ ಕತ್ತೆಯನ್ನು ಬಡಿಯುತ್ತಿದ್ದ ಹಳ್ಳಿಯವ ನಾನೇ. ನಿನ್ನನ್ನು ನಿನ್ನ ವಿನಾಶದ ಹಾದಿಗೆ ಕಳಿಸುವುದಕ್ಕಾಗಿ ನಿನಗೆ ಒಂಟೆಗಳ ಸಹಾಯವನ್ನು ನೀಡಿದ ವ್ಯಾಪಾರಿ ನಾನೇ. ಪ್ರವಾಹವನ್ನು ದಾಟಲು ಅನುಕೂಲವಾಗುವ ಸೇತುವೆಯನ್ನು ಕಟ್ಟಿದವನೂ ನಾನೇ ; ಎದುರಿಗೆ ಅಡ್ಡವಾದ ಬೆಟ್ಟದಲ್ಲಿ ಹಾದುಹೋಗುವಂತೆ ಸುರಂಗವನ್ನು ಕೊರೆದು ಕೊಟ್ಟವನೂ ನಾನೇ ; ಚಿಂತೆಯಿಲ್ಲ, ಮುಂದೆ ಹೋಗು, ಎಂದು ನಿನಗೆ ಪ್ರೋತ್ಸಾಹ ಕೊಟ್ಟ ವೈದ್ಯ ನಾನು ; ಕಾಳಗದ ದಿವಸ 'ಹೊಡಿ ! ಕಡಿ ! ಬಡಿ !' ಎಂದು ಕೂಗಿದ ಕಾಗೆ ನಾನು—"

"ಅಯ್ಯೋ ! ಭವಿಷ್ಯ ಏನು ಹೇಳಿತು, ಜ್ಞಾಪಿಸಿಕೋ : 'ನೀನು ಪೂರ್ವದ ಕಡೆಗೆ ಹೋದರೆ, ನೀನು ಪಶ್ಚಿಮದಲ್ಲಿ ಇರುವೆ' ಎಂದಲ್ಲವೆ ?" ಎಂದ, ಗೋವೋಧಿಕ.

"ಹೌದು. ಏಕೆಂದರೆ, ಇಲ್ಲಿ ಸತ್ತವರನ್ನು ಪಶ್ಚಿಮದ ಕಡೆ ಮುಖ ಮಾಡಿ ಹೂಳುತ್ತಾರೆ. ಭವಿಷ್ಯ ಇಷ್ಟು ಸ್ಪಷ್ಟವಾಗಿದ್ದರೂ, ಅದು ನಿನಗೆ ಅರ್ಥವಾಗದೆ ಹೋಯಿತು? ನೀನು ಪಡೆದೆ, ಆದರೂ ಪಡೆಯದೆ ಇದ್ದೆ; ಹೇಗೆಂದರೆ, ವಜ್ರ ನಿನ್ನ ವಶದಲ್ಲಿ ಇದ್ದರೂ, ಅದು ಖೋಟಾ ವಜ್ರ ವೆಂಬುದನ್ನು ನೀನು ತಿಳಿಯದೆಹೋದೆ. ನೀನು ವಿಜಯಶಾಲಿ ಯಾದರೂ, ನೀನು ಸಾಯುತ್ತೀಯೆ; ನೀನು ರುಸ್ತುಂ ಆದರೂ ರುಸ್ತುಂ ಅಲ್ಲದೆ ಹೋಗುತ್ತೀಯೆ. ಭವಿಷ್ಯ ನುಡಿದುದೆಲ್ಲ ಸಾರ್ಥಕವಾಯಿತು." ಎಂದ, ಕರೀಮುರ.

ಹೀಗೆ ಹೇಳುತ್ತಿದ್ದ ಹಾಗೆಯೇ ಗೋಮೋಧಿಕನ ಮೈಮೇಲೆ ನಾಲ್ಕು ಬಿಳಿಯ ರೆಕ್ಕೆಗಳೂ ಕರೀಮುರನಿಗೆ ನಾಲ್ಕು ಕರಿಯ ರೆಕ್ಕೆಗಳೂ ಹುಟ್ಟಿ ಕೊಂಡವು.

"ಇದೇನಿದು? ಯಾರು ನೀವು?" ಎಂದ, ರುಸ್ತುಂ.

"ನಾವು ನಿನ್ನ ಭಾಗ್ಯದ ದೇವತೆಗಳು" ಎಂದರು, ಇಬ್ಬರೂ.

"ಅಯ್ಯೋ, ನನ್ನ ವ್ಯವಹಾರಗಳಲ್ಲಿ ನೀವು ಏಕೆ ತಲೆಹಾಕ ಬೇಕಾಗಿತ್ತು? ನನ್ನಂಥ ಅಲ್ಪಮನುಷ್ಯನಿಗೆ ನಿಮ್ಮಂಥ ಭಾಗ್ಯದೇವತೆಗಳು ಇಬ್ಬರು ಏಕೆ ಇರಬೇಕು?" ಎಂದು ಗೋಳಾಡಿದ, ರುಸ್ತುಂ.

ಗೋಮೋಧಿಕ ಹೇಳಿದ: "ಪ್ರತಿ ಮನುಷ್ಯನಿಗೂ ಇಬ್ಬರು ಭಾಗ್ಯ ದೇವತೆಗಳು ಇರಬೇಕೆಂಬುದು ವಿಧಿಯ ನಿಯಮ. ಪ್ಲೇಟೋ ಇದನ್ನು ಆದಿಯಲ್ಲಿ ಹೇಳಿದ, ಇತರರು ಅವನಾದ ಮೇಲೆ ಅವನು ಹೇಳಿದ್ದನ್ನೇ ಹೇಳುತ್ತಿದ್ದಾರೆ. ಇದಕ್ಕಿಂತ ಸತ್ಯವಾದುದನ್ನು ನೀನು ಕಾಣಲಾರೆ. ಈಗ ನಿನ್ನೊಡನೆ ಮಾತನಾಡುತ್ತಿರುವ ಈ ನಾನು ನಿನ್ನ ಪಾಲಿನ ಒಳ್ಳೆಯ ದೈವ. ನಾನು ನಿನ್ನ ಪಕ್ಕದಲ್ಲಿದ್ದು ನಿನ್ನನ್ನು, ನೋಡಿಕೊಳ್ಳಬೇಕಾಗಿದ ನನ್ನ ಕರ್ತವ್ಯವನ್ನು ಮಾಡಿ ಮುಗಿಸಿದ್ದೇನೆ."

"ಆದರೆ, ನನ್ನ ಸೇವೆಮಾಡಬೇಕಾದದ್ದು ನಿಮ್ಮ ಕರ್ತವ್ಯವಾಗಿದ್ದರೆ, ನನ್ನ ಪ್ರಕೃತಿ ನಿಮ್ಮದಕ್ಕಿಂತ ಉತ್ತಮವಾದದ್ದು ಎಂದು ಹೇಳಿದ ಹಾಗಾ ಯಿತು. ಹಾಗಾದರೆ, ನೀವು ನನ್ನ ಭಾಗ್ಯದ ದೇವತೆಗಳು ಎಂದು ಹೇಳಿ ಕೊಳ್ಳುವವರು, ನನಗೆ ಈ ರೀತಿ ಮೋಸಮಾಡಿ, ಇಷ್ಟೆಲ್ಲಾ ಸಂಕಟ

ಕೊಟ್ಟು. ನನ್ನನ್ನು ಸಾಯಲು ಬಿಟ್ಟು, ನನ್ನ ಪ್ರೇಯಸಿಯನ್ನು ಈ ಸ್ಥಿತಿಗೆ ತಂದು—ಈ ಇದೆಲ್ಲಾ ಏಕೆ?"

"ಅನ್ಯಾಯ! ಆದರೂ ಅದು ನಿನ್ನ ಹಣೆಯ ಬರಹ" ಎಂದ, ಗೋಮೇಧಿಕ.

"ಹಾಗಾದರೆ, ಹಣೆಯ ಬರೆಹವೇ ಎಲ್ಲವನ್ನೂ ನಡಸುವುದಾದರೆ, ಭಾಗ್ಯದೇವತೆಯನ್ನು ಪಡೆದದ್ದರಿಂದ ಬಂದ ಭಾಗ್ಯವೇನು? ನೀನಾದರು, ಓ ಕರೀಮುರ, ನೀ ಯಾರು? ನಾಲ್ಕು ಕರಿಯ ರೆಕ್ಕೆಗಳುಳ್ಳ ನೀನು ನನ್ನ ಪಾಲಿನ ದೌರ್ಭಾಗ್ಯ ದೇವತೆಯೇನು?"

"ನೀನು ಹೇಳಿದ್ದು ತುಂಬ ಸರಿ" ಎಂದ, ಕರೀಮುರ.

"ಹಾಗಾದರೆ, ನೀನು ನನ್ನ ರಾಜಕುಮಾರಿಯ ದೌರ್ಭಾಗ್ಯ ದೇವತೆಯೂ ಹೌದೇನು?"

"ಅಲ್ಲ. ಅವಳ ದೇವತೆಯೇ ಬೇರೆ. ಆ ದೇವತೆಗೆ ನಾನು ತಕ್ಕಂತೆ ಬೆಂಬಲ ಕೊಟ್ಟೆ, ಅಷ್ಟೆ."

"ಅಯ್ಯೋ, ಪಾಪಿ! ನೀನು ಇಷ್ಟು ಕೇಡಿಗನಾಗಿರುವುದು ನಿಜವಾದರೆ, ಗೋಮೇಧಿಕನ ಸ್ವಾಮಿಗೆ ನೀನು ಎಂದಿಗೂ ಸೇವಕನಲ್ಲ. ನೀವಿಬ್ಬರೂ, ನೀನೂ ಅವನೂ, ಬೇರೆ ಬೇರೆ ಭಿನ್ನಶಕ್ತಿಗಳಿಂದ ಸೃಷ್ಟಿಯಾದವರು. ಅದರಲ್ಲಿ ಒಂದರ ಪ್ರವೃತ್ತಿ ಒಳ್ಳೆಯದು, ಇನ್ನೊಂದರದು ಕೆಟ್ಟದ್ದು."

"ಹಾಗೆಂದೇ ಏನೂ ಅರ್ಥಮಾಡಿಕೊಳ್ಳಬೇಕಾದ್ದಿಲ್ಲ. ವಿಷಯ ಅಷ್ಟು ಸುಲಭವಲ್ಲ" ಎಂದ, ಕರೀಮುರ.

"ಕರುಣಾಮಯನಾದ ಸರ್ವಶಕ್ತಿಯು ನಿನ್ನಂತ ಕರಾಳ ಹೃದಯಿಯನ್ನು ಸೃಷ್ಟಿಸಿತೆಂಬುದು ಅಸಂಭವ" ಎಂದ, ರುಸ್ತುಂ.

"ಅಸಂಭವವೋ, ಸಂಭವವೋ, ಸತ್ಯವೇನೋ ನಾನು ಹೇಳಿದ ಹಾಗೇ ಸರಿ" ಎಂದ, ಕರೀಮುರ.

ಅದಕ್ಕೆ ಗೋಮೇಧಿಕ ಹೇಳಿದ : "ಮಿತ್ರಾ! ಈ ಪಾಪಿಯ ಉದ್ದೇಶವನ್ನು ಕಾಣಲಾರೆಯಾ? ನಿನ್ನನ್ನು ವಾದಕ್ಕೆ ಎಳೆದು, ನಿನ್ನನ್ನು ರೇಗಿಸಿ, ಗೆನಿನಜ್ವರತಂದು ನಿನ್ನನ್ನು ಬೇಗ ಮರಣದ ಕಡೆಗೆ ಎಳೆಯಲು ಹವಣಿಸುತ್ತಿದ್ದಾನೆ."

ರುಸ್ತುಂ ವ್ಯಸನದಿಂದ ಹೇಳಿದ: "ಸಾಕು, ಹೋಗಾಚೆ. ನಿನ್ನನ್ನು ಕಂಡರೂ ನನಗೆ ರುಚಿಸುವುದಿಲ್ಲ. ಅವನಾದರೂ ನನಗೆ ಕೇಡುಂಟುಮಾಡುವುದೇ ತನ್ನ ಉದ್ದೇಶವೆಂದು ಬಾಯಿಬಿಟ್ಟು ಒಪ್ಪಿಕೊಳ್ಳುತ್ತಾನೆ. ಆದರೆ ನೀನು, ನನ್ನನ್ನು ರಕ್ಷಿಸುವೆನೆಂದು ನಟಿಸುವವನು, ನೀನು ನನಗೇನು ಒಳ್ಳೆಯದು ಸೇವೆಮಾಡಿದ್ದೀಯೆ?"

"ಅದಕ್ಕಾಗಿ ನನಗೆ ತುಂಬ ವ್ಯಾಕುಲವಾಗುತ್ತದೆ" ಎಂದ, ಗೋಮೋಧಿಕ.

"ನನಗೂ ಅದೇ ವ್ಯಾಕುಲ. ಇದರ ಅಡಿಯಲ್ಲಿ ಏನೋ ರಹಸ್ಯವಿದೆ. ಅದು ನನಗೆ ಗೋಚರವಾಗುತ್ತಿಲ್ಲ" ಎಂದ. ಸಾಯುವ ರುಸ್ತುಂ.

"ನನಗೂ ಗೋಚರವಾಗುತ್ತಿಲ್ಲ" ಎಂದ, ಗೋಮೋಧಿಕ.

"ಇನ್ನೊಂದು ಕ್ಷಣದಲ್ಲಿ ಅದನ್ನು ಕಂಡೇನು" ಎಂದ, ರುಸ್ತುಂ.

"ನೋಡೋಣ" ಎಂದ, ಗೋಮೋಧಿಕ.

ಅನಂತರ ಆ ದೃಶ್ಯವೆಲ್ಲ ಬದಲಾಯಿತು. ರುಸ್ತುಮನಿಗೆ ತಾನು ಮತ್ತೊಮ್ಮೆ ತನ್ನ ತಂದೆಯ ಮನೆಯಲ್ಲಿ ಮಲಗಿದಂತೆ ಅನುಭವವಾಯಿತು. ದಿಟವಾಗಿಯೂ ಅವನು ಆ ಮನೆಯಿಂದ ಅಗಲಿಹೋಗಿರಲಿಲ್ಲ. ಅಲ್ಲೇ ಹಾಸಿಗೆಯಲ್ಲಿ ಮಲಗಿದ್ದ. ಒಂದು ಗಂಟೆ ಹೊತ್ತು ನಿದ್ರೆಬಂದಿತ್ತು.

ರುಸ್ತುಂ ಬೆಚ್ಚಿ ಎದ್ದ. ಮೈಯೆಲ್ಲ ತಣ್ಣನೆ ಬೆವರು ದಿಗ್ಭ್ರಮೆ. ಮೈ ಚಿವುಟಿಕೊಂಡ, ಕೂಗಿದ, ಕಿರಿಚಿದ, ಗಂಟೆ ಬಾರಿಸಿದ.

ಕೂಡಲೆ ಅವನ ಸೇವಕ ಗೋಮೋಧಿಕ ಆಕಳಿಸುತ್ತ, ಮೈಮುರಿದುಕೊಳ್ಳುತ್ತ, ಓಡಿಬಂದ.

"ನಾನು ಬದುಕಿರುವೆನೋ?" ಎಂದು ರುಸ್ತುಂ ಕೇಳಿದ. "ಸುಂದರಿಯಾದ ಕಾಶ್ಮೀರದ ರಾಜಕುಮಾರಿ ಮತ್ತೆ ಸ್ವಸ್ಥಳಾಗುವಳೆ?" ಎಂದ.

"ಸ್ವಾಮಿಗೆ ಏನಾದರೂ ಕನಸು ಬಿತ್ತೇನು?" ಎಂದು ಗೋಮೋಧಿಕ ಭುಜ ಒದರುತ್ತ, ಕೇಳಿದ.

"ಆಹಾ! ಎಲ್ಲಿ, ಆ ಪಾಪಿ ಕರೀಮುರ? ಎಲ್ಲಿ ಅವನ ನಾಲ್ಕು ಕರೀರೆಕ್ಕೆ? ನನಗೆ ಇಂಥ ಕ್ರೂರವಾದ ಸಾವು ಬರುವುದಕ್ಕೆ ಅವನೇ ಕಾರಣ" ಎಂದು ರುಸ್ತುಂ ಕೂಗಾಡಿದ.

"ಸ್ವಾಮಿ, ನಾನು ಅವನನ್ನು ಬಿಟ್ಟುಬಂದಾಗ, ಅವನು ಇನ್ನೂ ಗೊರಕೆ ಹೊಡೆಯುತ್ತಿದ್ದ. ಅವನನ್ನು ಕೆಳಗೆ ಕರೆಯಲೇನು?" ಎಂದು ಕೇಳಿದ, ಗೋವೇಧಿಕ.

"ಆ ಪಾಪಿ ನನ್ನನ್ನು ಕಳೆದ ಈ ಆರು ತಿಂಗಳಿಂದಲೂ ಬಲು ಗೋಳುಹುಯ್ಯುತ್ತಿದ್ದಾನೆ. ಅವನೇ ನನ್ನನ್ನು ಆ ನತದೃಷ್ಟದ ಕಾಬೂಲಿನ ಸಂತೆಗೆ ಕರೆದುಕೊಂಡು ಹೋದನು; ರಾಜಕುಮಾರಿ ನನಗೆ ಕೊಟ್ಟಿದ್ದ ವಜ್ರವನ್ನು ಕದ್ದು ಅಡವಿಟ್ಟವನು ಅವನೇ; ನನ್ನ ಪ್ರಯಾಣಕ್ಕೂ, ರಾಜಕುಮಾರಿಯ ಸಾವಿಗೂ, ನಾನು ತಿಂದ ಭರ್ಜಿಯ ಅಪಾಯದ ಏಟಿಗೂ ಅವನೇ ಕಾರಣ" ಎಂದು ರೇಗಾಡಿದ. ರುಸ್ತುಂ.

"ಸ್ವಾಮಿಗೆ ಸಂತಾಪ ಬೇಡ. ನೀನು ಎಂದೂ ಕಾಬೂಲಿಗೆ ಹೋದದ್ದೂ ಇಲ್ಲ, ಕಾಶ್ಮೀರದ ರಾಜಕುಮಾರಿ ಎಂಬವಳೂ ಇಲ್ಲ; ಕಾಶ್ಮೀರದ ರಾಜನಿಗೆ ಇಬ್ಬರು ಗಂಡು ಮಕ್ಕಳು ಮಾತ್ರ, ಅವರಿಬ್ಬರೂ ಶಾಲೆಯಲ್ಲಿ ಓದುತ್ತಿದ್ದಾರೆ. ನಿನ್ನ ಹತ್ತಿರ ಯಾವುದೂ ವಜ್ರ ಇರಲಿಲ್ಲ, ಅದನ್ನು ಕರೀಮುರ ಕದ್ದು ಅಡವಿಟ್ಟದ್ದೂ ಇಲ್ಲ. ಕಾಶ್ಮೀರದ ರಾಜಕುಮಾರಿ, ಹುಟ್ಟಿದಿದ್ದವಳು, ಸತ್ತದ್ದೂ ಇಲ್ಲ. ನಿನಗಾದರೂ ಏನೂ ಆಯುಧದ ಏಟು ತಗುಲಿಲ್ಲ. ನೀನು ಸಂಪೂರ್ಣವಾಗಿ ಸ್ವಸ್ಥನಾಗಿದ್ದೀಯೆ."

"ಏನೇನು? ಕಾಶ್ಮೀರದ ರಾಜನ ಹಾಸಿಗೆಯಲ್ಲಿ ನಾನು ಮರಣಮುಖನಾಗಿ ಮಲಗಿದ್ದದ್ದು ಸುಳ್ಳೆ? ನೀನೇ ಆಗ ಅಲ್ಲಿ ನನಗೆ ಹೇಳಲಿಲ್ಲವೆ–ನೀನು ಕ್ರಮವಾಗಿ ಗಿಡಗನಾಗಿ, ಆನೆಯಾಗಿ, ಪಟ್ಟೆಕತ್ತೆಯಾಗಿ, ವೈದ್ಯನಾಗಿ, ಕೆಂಬೂತವಾಗಿ ಬಂದು, ನನ್ನನ್ನು ಅನೇಕ ಅಪಾಯಗಳಿಂದ ರಕ್ಷಿಸಲು ಪ್ರಯತ್ನಿಸಿದೆಯೆಂದು?" ಎಂದ, ರುಸ್ತುಂ.

"ಸ್ವಾಮಿ ಇದನ್ನೆಲ್ಲ ಕನಸುಕಂಡಿರಬೇಕು. ನಾವು ಎಚ್ಚರವಾಗಿರುವಾಗ ನಮ್ಮ ಭಾವನೆಗಳು ಎಷ್ಟುಮಟ್ಟಿಗೆ ನಮ್ಮ ಸ್ವಾಧೀನದಲ್ಲಿರುವುವೋ ನಿದ್ರೆ ಮಾಡುತ್ತಿರುವಾಗಲೂ ಅಷ್ಟೇ ಸ್ವಾಧೀನದಲ್ಲಿರುವುವು. ನಿನಗೆ ಈ ರೀತಿಯಾದ ಭಾವನೆಗಳ ಅನುಭವವಾಗಬೇಕು, ಅದರಿಂದ ನಿನಗೇನೋ ಬೋಧೆ, ಏನೋ ಉಪದೇಶ ನಡೆಯಬೇಕು—ಎಂಬುದು ದೈವದ ಸಂಕಲ್ಪವಿರಬೇಕು."

"ಏನಿದು, ಪರಿಹಾಸ್ಯವಾಡುತ್ತಿರುವೆಯೊ? ನಾನು ಮಲಗಿ ಎಷ್ಟು ಹೊತ್ತಾಯಿತು?" ಎಂದ, ರುಸ್ತುಂ.

"ನೀನು ಮಲಗಿ, ಒಂದು ಗಂಟೆಗೆ ಮೀರಿರಲಾರದು."

"ಅಲ್ಲವೋ, ಹರಟೆಯ ಮಲ್ಲ! ಈ ಒಂದು ಗಂಟೆಯೊಳಗಾಗಿ ನಾನು ಆರು ತಿಂಗಳಿನ ಹಿಂದೆ ಕಾಬೂಲಿನ ಸಂತೆಗೆ ಹೋಗಿ, ಅಲ್ಲಿಂದ ಮನೆಗೆ ಬಂದು, ಮತ್ತೆ ಕಾಶ್ಮೀರಕ್ಕೆ ಪ್ರಯಾಣ ಬೆಳೆಸಿ, ಬಬಾಬೂವನ್ನು ನಾನು ಕೊಂದು, ರಾಜಕುಮಾರಿ ತಾನು ಸತ್ತು, ಈಗ ನಾನು ಈ ಸಾಯುವ ಸ್ಥಿತಿಗೆ ಬಂದು—ಇದೆಲ್ಲಾ ನಡೆಯಿತೆಂದು ನಂಬಲಿ?" ಎಂದ, ರುಸ್ತುಂ.

"ಇದಕ್ಕಿಂತ ಸುಲಭವಾದದ್ದೂ ಇದರಷ್ಟು ಸಾಮಾನ್ಯವಾದದ್ದೂ ಬೇರೊಂದಿಲ್ಲ. ಇದಕ್ಕಿಂತ ಕಡಿಮೆ ಕಾಲಾವಕಾಶದಲ್ಲಿ ನೀನು ಪ್ರಪಂಚವನ್ನೆಲ್ಲಾ ಸುತ್ತಿಬರಬಹುದು, ಇದಕ್ಕಿಂತ ಹೆಚ್ಚಿನ ಸಾಹಸಾನುಭವಗಳು ನಿನಗೆ ಆಗಬಹುದು. ಸೊರಾಸ್ಟರ್ ಮಹಾಪುರುಷನು ಬರೆದಿರುವ ಪರ್ಷಿಯಾ ದೇಶದ ಚರಿತ್ರೆಯ ಸಾರಾಂಶವನ್ನು ಒಂದು ಗಂಟೆಯ ಒಳಗೆ ಓದಿ ಮುಗಿಸುವುದು ಸಾಧ್ಯವಿಲ್ಲವೆ? ಆದರೂ ಆ ಸಾರಾಂಶದಲ್ಲಿ ಎಂಟು ನೂರು ಸಾವಿರ ವರ್ಷಗಳು ಅಡಕವಾಗಿಲ್ಲವೆ? ಅಲ್ಲಿನ ಸಂಘಟನೆಗಳೆಲ್ಲ ಒಂದಾದ ಮೇಲೆ ಒಂದರಂತೆ ಒಂದು ಗಂಟೆಯೊಳಗಾಗಿ ನಿನ್ನ ಕಣ್ಣ ಮುಂದೆ ಹಾಯ್ದು ಹೋಗುವುದಲ್ಲವೆ? ಹಾಗೆಂದಮೇಲೆ, ಒಂದು ಗಂಟೆಯಲ್ಲಿ ಅಡಕವಾಡಿದುದನ್ನು ಎಂಟುನೂರು ಸಾವಿರ ವರ್ಷಗಳ ಪರ್ಯಂತ ಹರಡುವ ಸಾಮರ್ಥ್ಯ ದೈವಕ್ಕೆ ಇದೆಯೆಂದು ಒಪ್ಪಿಕೊಳ್ಳಲೇಬೇಕು. ಅನಂತವಾದ ವ್ಯಾಸದ ಒಂದು ಮಹಾಚಕ್ರದ ಮೇಲೆ ಕಾಲವೆಂಬುದು ತಿರುಗುತ್ತಿದೆ ಎಂದು ಇಟ್ಟುಕೊ; ಈ ಮಹಾಚಕ್ರದ ಅಡಿಯಲ್ಲಿ ಅಸಂಖ್ಯಾತವಾದ ಇತರ ಚಕ್ರಗಳು, ಒಂದರೊಳಗೆ ಒಂದರಂತೆ, ಇವೆ ಎಂದುಕೊ; ಮಧ್ಯದ ಚಕ್ರ ಅದೃಶ್ಯವಾಗಿದ್ದು, ಮಹಾಚಕ್ರ ಒಂದು ಸುತ್ತು ಸುತ್ತುವುದಕ್ಕೆ ಎಷ್ಟು ವೇಳೆ ತೆಗೆದುಕೊಳ್ಳುವುದೋ ಅಷ್ಟೇ ವೇಳೆಯಲ್ಲಿ ಮಧ್ಯದ ಚಕ್ರ ಅನಂತವಾದ ಸುತ್ತುಗಳನ್ನು ಸುತ್ತುತ್ತದೆ, ಎಂದುಕೊ. ಇದರಿಂದ, ಜಗತ್ತಿನ ಆದಿಯಿಂದ ಹಿಡಿದು ಅಂತ್ಯದವರೆಗೂ

ನಡೆಯುವ ಸಂಘಟನೆಗಳೆಲ್ಲವೂ ಒಂದೇ ಒಂದು ಕ್ಷಣದ ನೂರು ಸಾವಿರ ದಲ್ಲೊಂದು ಪಾಲಿನ ಸಮಯದಲ್ಲಿ ನಡೆದುಹೋಗಿರುವುದು ಸಾಧ್ಯ ಎಂಬುದು ಸ್ಪಷ್ಟ. ಯಥಾರ್ಥ ಕೂಡ ಹಾಗೇ ಇರಬೇಕು ಎಂದು ಬೇಕಾದರೂ ಸ್ಥಾಪಿಸಬಹುದು." ಎಂದ, ಗೋಮೇಧಿಕ.

"ಅದು ಒಂದೂ ನನಗೆ ಅರ್ಥವಾಗುವುದಿಲ್ಲ" ಎಂದ, ರುಸ್ತುಂ.

ಗೋಮೇಧಿಕ ಹೇಳಿದ: "ನನ್ನ ಬಳಿ ಒಂದು ಗಿಳಿ ಇದೆ. ನಿನಗೆ ಬೇಕಾದರೆ, ಅದು ಇದನ್ನೆಲ್ಲಾ ಏನೂ ಕಷ್ಟವಿಲ್ಲದೆ ಸ್ಪಷ್ಟಮಾಡಿಕೊಡುತ್ತದೆ. ಅದು, ಪ್ರಳಯಕಾಲಕ್ಕೆ ಸ್ವಲ್ಪ ಮುಂಚೆ ಮೊಟ್ಟೆಯಿಂದ ಈಚೆ ಬಂದಿತಂತೆ. ಅದು ಅನೇಕವನ್ನು ಕಂಡಿದೆ. ಆದರೂ ಅದರ ವಯಸ್ಸು ಒಂದೂವರೆ ವರ್ಷ ಮಾತ್ರ. ಅದರ ಚರಿತ್ರೆ ಬೇಕಾದರೆ ಹೇಳುತ್ತೇನೆ. ಅದು ತುಂಬ ಸ್ವಾರಸ್ಯವಾಗಿದೆ."

"ಹೋಗು ಬೇಗ. ಬೇಗ ಅದನ್ನು ಎತ್ತಿಕೊಂಡು ಬಾ. ನನಗೆ ಮತ್ತೆ ನಿದ್ರೆ ಬರುವವರೆಗಾದರೂ ಅದು ವಿನೋದಪಡಿಸುತ್ತಿರಲಿ." ಎಂದ, ರುಸ್ತುಂ.

"ಅದು ನನ್ನ ತಂಗಿಯ ಬಳಿಯಿದೆ. ಹೋಗಿ, ತರುತ್ತೇನೆ. ನಿನಗೆ ಅದರಿಂದ ಖಂಡಿತ ಸಂತೋಷವಾಗುತ್ತದೆ. ಅದರ ಜ್ಞಾಪಕಶಕ್ತಿ ಅದ್ಭುತವಾಗಿದೆ. ಕತೆ ಚೆನ್ನಾಗಿ ಹೇಳುತ್ತದೆ."

"ಇನ್ನೂ ಒಳ್ಳೆಯದಾಯಿತು. ಕತೆ ಹೇಳಿದರೆ, ಹಾಗೆ ಹೇಳಬೇಕು" ಎಂದ, ರುಸ್ತುಂ.

ಗೋಮೇಧಿಕ ಹೋಗಿ, ಆ ಗಿಳಿಯನ್ನು ಎತ್ತಿಕೊಂಡು ಬಂದ. ಗಿಳಿ ಹೀಗೆ ಹೇಳಿತು :

[ಷರಾ : ಈ ಕತೆಯನ್ನು ಹೇಳಿದ ಮಹಾಶಯನ ತಂಗಿ, ಇದನ್ನು ಬರೆದಿಟ್ಟದ್ದ ಕಡೆಯ ಹಾಳೆಗಳು ಕಳೆದುಹೋಗಿವೆ ಎಂದು ತಿಳಿಸುತ್ತಾಳೆ. ಅನ್ಯಾಯ! ಗಿಳಿ ಯಾವ ಕಾಲದಲ್ಲಿ ಬದುಕಿತ್ತು ಎಂಬುದನ್ನು ನೆನೆದುಕೊಂಡರೆ, ಇದು ನಿಜವಾಗಿಯೂ ಬಹು ದೊಡ್ಡ ನಷ್ಟ.]

*

# ಬಬೂಕನ ಕಣಸು

ಅಥವಾ

# ಜಗತ್ತಿನ ಯಥಾರ್ಥಗಮನ

---

## ಅಧ್ಯಾಯ ಒಂದು

ಜಗತ್ತಿನ ಚಕ್ರಾಧಿಪತ್ಯಗಳ ಮೇಲೆ ಉಸ್ತುವಾರಿ ನಡೆಸುತ್ತಿರುವ ಅಭಿಮಾನಿ ದೇವತೆಗಳಲ್ಲೆಲ್ಲ ಇಥೂರಿಯಲ್ ಎಂಬ ದೇವತೆ ಉತ್ತರ ಏಷ್ಯಾದ ಪ್ರಾಂತವನ್ನು ಆಳುತ್ತದೆ

ಒಂದು ದಿನ ಈ ದೇವತೆ ಭೂಮಿಗೆ ಇಳಿದುಬಂತು. ಸಿಥಿಯಾ ದೇಶದಲ್ಲಿ, ಆಕ್ಸಸ್ ಎಂಬ ನದಿಯ ತೀರದಲ್ಲಿ ವಾಸವಾಗಿದ್ದ ಬಬೂಕನೆಂಬವನ ಮನೆಯನ್ನು ಪ್ರವೇಶಿಸಿ, ಅವನನ್ನು ಕುರಿತು ಹೀಗೆ ಹೇಳಿತು :

''ಓ ಬಬೂಕ ! ಪರ್ಷಿಯಾ ದೇಶದವರ ಅನಾಚಾರಗಳನ್ನೂ ಅವಿವೇಕಗಳನ್ನೂ ಕಂಡು ನಮಗೆ ಅಸಾಧ್ಯವಾದ ಕ್ರೋಧವುಂಟಾಗಿದೆ. ಉತ್ತರ ಏಷ್ಯಾದ ಹಿತಚಿಂತಕರಾದ ದೇವತೆಗಳೆಲ್ಲಾ ನೆನ್ನೆ ಸಭೆ ಸೇರಿ, ಪರ್ಷಿಯಾ ದೇಶವನ್ನು ಶಿಕ್ಷಿಸಬೇಕೋ ಅಥವಾ ಸಂಪೂರ್ಣವಾಗಿ ನಾಶ ಮಾಡಿಯೇ ಬಿಡಬೇಕೋ ಎಂದು ಚರ್ಚೆಮಾಡಿದರು. ನೀನು ಪರ್ಷಿಯಾಕ್ಕೆ ಹೋಗು, ಅಲ್ಲಿನ ಸ್ಥಿತಿಗಳನ್ನು ಕೂಲಂಕಷವಾಗಿ ಪರಿಶೀಲಿಸು. ಹಿಂದಿರುಗಿ ಬಂದು, ನನಗೆ ಯಥಾರ್ಥವಾದ ವರದಿಯನ್ನು ಒಪ್ಪಿಸು. ನಿನ್ನ ವರದಿಯನ್ನು ನೋಡಿಕೊಂಡು, ಅನಂತರ ಅವರನ್ನು ಶಿಕ್ಷಿಸಬೇಕೋ ಸಂಹಾರಮಾಡಬೇಕೋ ಎಂಬುದನ್ನು ಇತ್ಯರ್ಥಮಾಡುವೆವು.''

''ಆದರೆ, ಓ ಪ್ರಭುವೇ, ನಾನು ಎಂದೂ ಪರ್ಷಿಯಾಕ್ಕೆ ಹೋದುದಿಲ್ಲ, ಅಲ್ಲಿ ಯಾರೂ ನನಗೆ ಪರಿಚಯ ಕೂಡ ಇಲ್ಲ'' ಎಂದು ಬಬೂಕ ವಿನಯದಿಂದ ವಿಜ್ಞಾಪಿಸಿಕೊಂಡ.

ಅದಕ್ಕೆ ದೇವತೆ ಹೇಳಿತು : "ಹಾಗಾದರೆ, ಮತ್ತೂ ಒಳ್ಳೆಯದೇ ಆಯಿತು. ನೀನು ಪಕ್ಷಪಾತವಿಲ್ಲದೆ ಪರಿಶೀಲನೆ ನಡೆಸಬಹುದು. ದೇವರು ನಿನಗೆ ವಿವೇಕ ಕೊಟ್ಟಿದ್ದಾನೆ, ಜನರ ನಂಬಿಕೆಯನ್ನು ಸಂಪಾದಿಸುವ ಸಾಮರ್ಥ್ಯವನ್ನು ನಾನು ನಿನಗೆ ನೀಡುತ್ತೇನೆ. ಹೋಗು, ನೋಡು, ಕೇಳು, ಗಮನಿಸು, ಭಯ ಏನೂ ಬೇಡ. ಹೋದ ಹೋದಲ್ಲೆಲ್ಲ ನಿನ್ನನ್ನು ಜನ ಸ್ವಾಗತಿಸುತ್ತಾರೆ."

ಬಬೂಕನು ತನ್ನ ಒಂಟೆಯನ್ನು ಏರಿದನು, ಸೇವಕರೊಡನೆ ಪ್ರಯಾಣ ಹೊರಟನು. ಕೆಲವು ದಿವಸಗಳಾದಮೇಲೆ, ಪರ್ಷಿಯಾದ ಗಡಿನಾಡಿಗೆ ಬಂದನು. ಅಲ್ಲಿ, ಪರ್ಷಿಯಾ ದೇಶದ ಸೈನ್ಯ ಇಂಡಿಯಾ ದೇಶದ ಸೈನ್ಯದೊಡನೆ ಹೋರಾಟಕ್ಕೆ ಹೊರಡಲು ಸಿದ್ಧವಾಗುತ್ತಿತ್ತು. ಬಬೂಕನು ಅವರಲ್ಲಿ ಒಬ್ಬ ಸೈನಿಕನನ್ನು ಕರೆದು, "ಏನಪ್ಪಾ? ಇದೇನಿದು? ಈ ಯುದ್ಧಕ್ಕೆ ಏನು ಕಾರಣ?" ಎಂದು ಕೇಳಿದ.

ಅದಕ್ಕೆ ಆ ಸೈನಿಕ ಹೇಳಿದ : "ದೇವರಿಗೆ ಗೊತ್ತು! ನನಗೇನು ಗೊತ್ತು? ಏಕೋ ಕಟ್ಟಿಕೊಂಡು ನನಗೇನು? ಜೀವನೋಪಾಯಕ್ಕಾಗಿ ಕೊಲ್ಲುವುದು, ಕೊಲ್ಲಿಸಿಕೊಳ್ಳುವುದು—ಇದು ಇಷ್ಟೇ ನನ್ನ ವೃತ್ತಿ. ನಾನು ಯಾರ ಸೇವಕನಾದರೇನು? ಯಾರ ಮೇಲೆ ಯುದ್ಧಮಾಡಬೇಕಾದರೆ, ನನಗೇನು? ನಾಳೆ ಆಚೆ ಕಡೆ ಇಂಡಿಯಾ ಸೈನ್ಯದೊಡನೆ ಸೇರಿಕೊಂಡುಬಿಡಲೇ—ಎಂದು ಯೋಚಿಸುತ್ತಿದ್ದೇನೆ. ಏಕೆಂದರೆ, ಈ ಪರ್ಷಿಯಾದ ದರಿದ್ರ ಕೂಲಿಗಿಂತ ಅಲ್ಲಿ ಅವರು ಏನೋ ಒಂದು ಅರ್ಧಹಣ ಹೆಚ್ಚಿಗೆ ಸಂಬಳ ಕೊಡುತ್ತಿದ್ದಾರಂತೆ. ನಾವು ಏಕೆ ಈ ಹಾಳು ಕಾದಾಟಕ್ಕೆ ಸಜ್ಜಾಗುತ್ತಿರುವೆವೆಂದು ತಿಳಿಯಬೇಕಾದರೆ, ಅದೋ ಅಲ್ಲಿ ಆಚೆ ನಮ್ಮ ಪಾಳೆಯ ಇದೆ; ಅದರ ಆಚೆ ನಮ್ಮ ಅಧಿಕಾರಿ ಇದ್ದಾನೆ, ಅವನನ್ನು ಕೇಳು."

ಬಬೂಕನು ಆ ಸೈನಿಕನಿಗೆ ಒಂದು ಸಣ್ಣ ಬಹುಮಾನ ಕೊಟ್ಟು, ಪಾಳೆಯವನ್ನು ಪ್ರವೇಶಿಸಿದನು. ಸೈನ್ಯಾಧಿಕಾರಿಯ ಪರಿಚಯ ಮಾಡಿಕೊಂಡನು, ಯುದ್ಧಕ್ಕೆ ಕಾರಣವೇನು ಎಂದು ಪ್ರಶ್ನಿಸಿದನು.

ಅದಕ್ಕೆ ಅವನು ಹೇಳಿದ : "ಅದೆಲ್ಲಾ ನನಗೇನು ಗೊತ್ತು? ಅಂಥ ಮಹಾ ಘನವಾದ ವಿಷಯಗಳೆಲ್ಲಾ ಮೇಲಧಿಕಾರಿಗಳಿಗೆ ಸಂಬಂಧಿಸಿದು

ನಾನು ರಾಜಧಾನಿಯಿಂದ ಇನ್ನೂರು ಯೋಜನಗಳ ದೂರದಲ್ಲಿದ್ದೇನೆ. ಯುದ್ಧ ಘೋಷಣೆಯಾಯಿತೆಂದು ಕೇಳಿದೆ; ಕೂಡಲೆ, ನಮ್ಮ ಪದ್ಧತಿಯ ಮೇರೆಗೆ, ಮನೆ ಮಠವನ್ನು ಬಿಟ್ಟು, ಬೇರೆ ಏನು ಮಾಡುವುದಕ್ಕೂ ತೋಚದೆ, 'ಗೆದ್ದರೆ ಗೆದ್ದೆ, ಸತ್ತರೆ ಸತ್ತೆ' ಎಂದು ಇಲ್ಲಿಗೆ ಬಂದೆ.''

''ಇರಬಹುದು. ಆದರೆ, ನಿನ್ನ ಸಂಗಾತಿಗಳಿಗಾದರೂ ಈ ವಿಷಯ ಸ್ವಲ್ಪಮಟ್ಟಿಗಾದರೂ ಗೊತ್ತಿರಬೇಕಲ್ಲವೆ?" ಎಂದ, ಬಬೂಕ.

''ಸರಿ, ಅದು ಹೇಗೆ ಗೊತ್ತು? ನಮ್ಮ ಮುಖ್ಯಾಧಿಕಾರಿಗಳು ಕೆಲವರಿಗೆ ಮಾತ್ರ ಗೊತ್ತಿರಬಹುದೇ ಹೊರತು, ಉಳಿದವರು ಯಾರಿಗೂ ತಾವು ಏಕೆ ಒಬ್ಬರು ಒಬ್ಬರ ಕತ್ತು ಕುಯ್ಯುತ್ತಿರುವೆವೆಂಬುದು ಗೊತ್ತಿಲ್ಲ" ಎಂದ, ಆ ಅಧಿಕಾರಿ.

ಬಬೂಕನಿಗೆ ಆ ಮಾತು ಕೇಳಿ ವಿಸ್ಮಯವಾಯಿತು. ಮುಖ್ಯಾಧಿಕಾರಿಗಳ ಹತ್ತಿರ ಹೋದ. ಬಹುಬೇಗ ಅವರವರಿಗೆ ನ್ಯಾಸ್ತ ಬೆಳೆಯಿತು. ಅವರಲ್ಲಿ ಒಬ್ಬ ಹೇಳಿದ :

"ಈ ಯುದ್ಧ ಕಳೆದ ಇಪ್ಪತ್ತು ವರ್ಷಗಳಿಂದಲೂ ಏಷ್ಯಾವನ್ನು ಸ್ಮಶಾನವನ್ನಾಗಿ ಮಾಡುತ್ತಿದೆ. ಇದರ ಮೂಲ ಎಲ್ಲಿ ಯಾವಾಗ ಆಯಿತು, ಗೊತ್ತೆ? ಪರ್ಷಿಯಾ ರಾಜನ ಅಂತಃಪುರದಲ್ಲಿ ಕಾವಲಿದ್ದ ಒಬ್ಬ ನಪುಂಸಕನಿಗೂ, ಇಂಡಿಯಾ ದೇಶದ ಚಕ್ರವರ್ತಿಯ ಸುಂಕದಕಟ್ಟೆ ಸೇವಕನೊಬ್ಬನಿಗೂ ಒಮ್ಮೆ ಒಂದು ಹಾಗದ ಕಾಸಿನ ವಿಷಯದಲ್ಲಿ ವಿವಾದ ಹತ್ತಿಕೊಂಡಿತಂತೆ. ಇಂಡಿಯಾದ ಮುಖ್ಯಮಂತ್ರಿ ತಮ್ಮ ಸುಂಕದವನ ಪಕ್ಷ ವಹಿಸಿದ, ಪರ್ಷಿಯಾದ ಮುಖ್ಯಮಂತ್ರಿ ತಮ್ಮ ನಪುಂಸಕನ ಪಕ್ಷ ವಹಿಸಿದ. ಜಗಳ ದೊಡ್ಡದಾಯಿತು. ಎರಡು ಕಡೆಯ ಅರಸರೂ ಒಂದೊಂದು ಅಕ್ಷೋಹಿಣಿ ಸೈನ್ಯವನ್ನು ಯುದ್ಧಭೂಮಿಗೆ ಕಳಿಸಿದರು. ಅಂದಿನಿಂದ ಪ್ರತಿ ವರ್ಷವೂ ಎರಡು ಕಡೆಗೆ ನಾಲ್ಕು ಲಕ್ಷ ಜನ ಹೊಸದಾಗಿ ಬಂದು ಸೇರುತ್ತಿದ್ದಾರೆ. ಕೊಲೆ ಮಾಡುವುದೇನು, ಬೆಂಕಿ ಹಚ್ಚುವುದೇನು, ಕೊಳ್ಳೆ ಹೊಡೆಯುವುದೇನು, ನಾಶಗೊಳಿಸುವುದೇನು, ಲೆಕ್ಕವಿಲ್ಲ. ಜಗತ್ತೆಲ್ಲವೂ ಈ ಕ್ಷೋಭೆಗೆ ಸಿಕ್ಕಿ ನರಳುತ್ತಿದ್ದರೂ, ಎರಡು ಕಡೆಯಲ್ಲಿ ಯಾರಿಗೂ ಇನ್ನೂ ತೃಪ್ತಿಯಿಲ್ಲ. ನಮ್ಮ ಕಡೆಯ ಮುಖ್ಯಮಂತ್ರಿಯೂ

ಅಷ್ಟೆ, ಇಂಡಿಯಾದ ಕಡೆಯ ಮುಖ್ಯಮಂತ್ರಿಯೂ ಅಷ್ಟೆ, ಹೇಳುತ್ತಾರೆ: 'ಮಾನವ ಜನಾಂಗದ ಸುಖಶಾಂತಿಗಳಿಗಾಗಿ ನಾವು ಈ ಯುದ್ಧವನ್ನು ಮಾಡುತ್ತಿದ್ದೇವೆ' ಎಂದು. ಅವರು ಒಂದೊಂದು ಸಲ ಈ ಮಾತು ಹೇಳಿದಾಗಲೂ ಒಂದಷ್ಟು ನಗರ ಉರಿದುಹೋಗುತ್ತದೆ, ಒಂದು ಹೊಸ ಪ್ರಾಂತ ನಾಶವಾಗುತ್ತದೆ."

ಮಾರನೆಯ ದಿವಸ, ಶಾಂತಿಗಾಗಿ ಸಂಧಾನ ನಡೆಯುತ್ತಿದೆ ಎಂಬ ಸುದ್ದಿ ಬಂತು. ಸುದ್ದಿ ಸೂಚನೆಯಾಯಿತೋ ಇಲ್ಲವೋ, ಎರಡು ಸೈನ್ಯಗಳ ಮುಖ್ಯಾಧಿಕಾರಿಗಳೂ ಯುದ್ಧವಾಗಲಿ ಎಂದು ಕೈಬೀಸಿದರು; ರಕ್ತದ ಕೋಡಿ ಹರಿಯಿತು. ಸೈನ್ಯಗಳ ತಪ್ಪುಗಳನ್ನೂ ಅತ್ಯಾಚಾರಗಳನ್ನೂ ಬಬೂಕ ನೋಡಿದ; ಮುಖ್ಯಾಧಿಕಾರಿಗಳ ಕುಟಿಲವಾದ ತಂತ್ರಗಳನ್ನು ಗಮನಿಸಿದ; ತಮ್ಮ ಕಡೆಯವರಿಗೇ ಸೋಲಾಗುವಂತೆ ತಮ್ಮ ತಮ್ಮವರೇ ನಡಸಿದ ದ್ರೋಹಗಳನ್ನು ಕಂಡ. ಸೈನಿಕರು ತಮ್ಮ ಸೈನ್ಯಾಧಿಕಾರಿಯ ಮೇಲೆಯೇ ಕತ್ತಿ ಎತ್ತಿ ಬೀಸಿದರು; ತಮ್ಮ ಜೊತೆಯ ಸೈನಿಕರು ಏಟು ತಿಂದು, ಕೆಳಗೆ ಬಿದ್ದು, ಕೈಲಾಗದೆ ಸಾಯುತ್ತಿರುವಾಗ, ಅವರವರೇ ಅವರ ಬಟ್ಟೆಬರೆಗಳನ್ನು ಕಿತ್ತುಕೊಂಡು ಗಂಟುಕಟ್ಟಿಕೊಳ್ಳುತ್ತಿದ್ದರು. ರಣರಂಗದ ಆಸ್ಪತ್ರೆಯಲ್ಲಿ ಗಾಯಗೊಂಡವರನ್ನು ಕೇಳುವವರೇ ಗತಿಯಿರಲಿಲ್ಲ; ಪರ್ಷಿಯಾದ ದೊರೆ ಕಳಿಸಿದ ದ್ರವ್ಯವನ್ನು ಮಾತ್ರ ಚೀಲಕ್ಕೆ ತುಂಬಿಕೊಳ್ಳುತ್ತ, ಸಾಯುವವರನ್ನು ಅವರ ಪಾಡಿಗೆಬಿಟ್ಟು, ನಿರ್ಯೋಚನೆಯಿಂದಿದ್ದ ವೈದ್ಯರನ್ನು ಬಬೂಕ ನೋಡಿದ.

"ಇವರೇನು ಮನುಷ್ಯರೋ, ಕಾಡುಮೃಗಗಳೋ ?" ಎಂದುಕೊಂಡ. "ಖಂಡಿತ, ಹೀಗಾದರೆ, ಪರ್ಷಿಯಾ ನಾಶವಾಗಿಹೋಗುತ್ತದೆ."

ಹೀಗೆಂದು ಚಿಂತಿಸುತ್ತಾ, ಬಬೂಕನು ಇಂಡಿಯನರ ಪಾಳಯವನ್ನು ಹೊಕ್ಕನು. ಪರ್ಷಿಯನರ ಪಾಳಯದಲ್ಲಿ ದೊರೆತಂತಹ ಸ್ವಾಗತವೇ ಇಲ್ಲೂ ಅವನಿಗೆ ದೊರಕಿತು. ಅವನೂ ಅದನ್ನೇ ನಿರೀಕ್ಷಿಸಿದ್ದನು. ಆದರೆ ಅವರ ಪಾಳಯದಲ್ಲಿ ಕಂಡ ಅನ್ಯಾಯ ದುರಾಚಾರಗಳನ್ನೇ ಇವರ ಪಾಳಯದಲ್ಲೂ ಕಾಣುವೆನೆಂದು ಮಾತ್ರ ಅವನು ನಿರೀಕ್ಷಿಸಿರಲಿಲ್ಲ. ಅನಿರೀಕ್ಷಿತವಾದುದನ್ನು ಕಂಡು ಭಯದಿಂದ ನಡುಗಿಹೋದ.

"ಅಯ್ಯೊ! ಇಥೂರಿಯಲ್ ದೇವತೆಯೇನಾದರೂ ಪಾರಸಿಕರನ್ನು ನಿರ್ಮೂಲಮಾಡಲು ನಿಶ್ಚಯಿಸಿದರೆ, ಇಂಡಿಯಾದ ಅಭಿಮಾನಿದೇವತೆ ಈ ಇಂಡಿಯನರನ್ನೂ ನಿರ್ಮೂಲಮಾಡಬೇಕಾದೀತು" ಎಂದುಕೊಂಡ.

ಅನಂತರ ಎರಡೂ ಕಡೆಯ ಪಾಳಯದಲ್ಲಿ ತಿರುಗಾಡಿ, ಇನ್ನಷ್ಟು ಸೂಕ್ಷ್ಮವಾಗಿ ಸಂಗತಿಗಳನ್ನು ಸಂಗ್ರಹಿಸಿಕೊಂಡ. ಆಗ ಅವನು ಕಂಡ ಔದಾರ್ಯದ ಗುಣ, ಕೇಳಿದ ಕರುಣದ ಕತೆ, ಅವನಿಗೆ ತುಂಬ ಆಶ್ಚರ್ಯ ವುಂಟುಮಾಡಿತು, ಸಂತೋಷ ಕೊಟ್ಟಿತು. "ಎಷ್ಟೇ ಆದರೂ, ಮನುಷ್ಯರೇ ಅಲ್ಲವೇ ಇವರೂ!" ಎಂದುಕೊಂಡ.

"ಅರ್ಥವೇ ಆಗುವುದಿಲ್ಲ, ಈ ಮನುಷ್ಯರ ಸ್ವಭಾವ! ಇಷ್ಟು ಅಲ್ಪತನ ಅಷ್ಟು ದೊಡ್ಡತನದೊಡನೆ, ಇಷ್ಟು ಕ್ರೌರ್ಯ ಅಷ್ಟು ದಯೆಯೊಡನೆ ಒಟ್ಟಿಗೆ ಒಂದೇ ಕಡೆ ಕಂಡುಬರುವುದು ಪರಮ ಆಶ್ಚರ್ಯ!" ಎಂದು ಮೆಚ್ಚಿಕೊಂಡ.

ಈ ಮಧ್ಯೆ ಶಾಂತಿ ಏರ್ಪಟ್ಟಿತು. ಎರಡೂ ಸೈನ್ಯಗಳ ಮುಖ್ಯಾಧಿಕಾರಿಗಳು, ತಮಗೆ ಯಾರಿಗೂ ಜಯ ಪ್ರಾಪ್ತವಾಗದಿದ್ದರೂ, ತಾವು ತಮ್ಮ ಜೊತೆಯವರ ರಕ್ತವನ್ನು ಎಷ್ಟೇ ವ್ಯರ್ಥವಾಗಿ ಪ್ರವಾಹ ಹರಿಸಿದ್ದರೂ, ತಮ್ಮ ಸ್ವಾರ್ಥವನ್ನು ಮಾತ್ರ ತಾವು ಎಷ್ಟೇ ಕಣ್ಣ ಮುಂದಿರಿಸಿಕೊಂಡು ಕಾದಾಡಿದ್ದರೂ, ಯುದ್ಧ ನಿಂತಿತು ಎಂದ ಕೂಡಲೆ ತಮ್ಮ ತಮ್ಮ ಪರಾಕ್ರಮವನ್ನೂ ಸ್ವಾಮಿಭಕ್ತಿಯನ್ನೂ ಕೊಚ್ಚಿಕೊಂಡು, ಪಾರಿತೋಷಕಗಳಿಗಾಗಿ ಪ್ರಾರ್ಥಿಸಿಕೊಂಡರು. ಸಾರ್ವಜನಿಕ ಸಭೆಗಳಲ್ಲಿ ಶಾಂತಿಯ ಸಾಧನೆಯನ್ನು ಕೊಂಡಾಡಿದರು; ಲೋಕ ಸುಭಿಕ್ಷವಾಯಿತು, ಲೋಕ ಸುರಕ್ಷಿತವಾಯಿತು, ಎಂದು ಹಾಡಿ ಹೊಗಳಿದರು.

"ಸದ್ಯಃ, ದೇವರ ದಯೆ! ಪರ್ಷಿಯಾ ತನ್ನ ದುರ್ಮಾರ್ಗದಿಂದ ದೂರವಾಯಿತು. ಇಥೂರಿಯಲ್ ಅದನ್ನು ನಾಶಮಾಡುವುದಿಲ್ಲ. ದೇವತೆಗಳ ಆ ದುರಾಲೋಚನೆ ನಿರಾಧಾರವಾಯಿತು. ಇನ್ನು, ಪರ್ಷಿಯದ ರಾಜಧಾನಿಯನ್ನು ಪ್ರತ್ಯಕ್ಷವಾಗಿ ಹೋಗಿ ನೋಡಿಬರೋಣ" ಎಂದು ಬಬೂಕನು ನಿಶ್ಚಿಂತನಾದನು.

## ಅಧ್ಯಾಯ ಎರಡು

ಬಬೂಕನು ಆ ಮಹಾನಗರದ ಸಮೀಪಕ್ಕೆ ಬಂದ. ನಗರ ದೊಳಕ್ಕೆ ಹೋಗುವ ಮುಖ್ಯ ಮಾರ್ಗವನ್ನು ನೋಡಿದ. ದಾರಿ ಒಡ್ಡೊಡ್ಡಾಗಿತ್ತು. ಅವನಿಗೆ ಆಸಹ್ಯವಾಯಿತು ಆ ನಗರವನ್ನು ಮೊದಲು ಸ್ಥಾಪಿಸಿದಾಗ ಹೇಗಿತ್ತೋ ರಸ್ತೆ, ಈಗಲೂ ಹಾಗೆಯೇ ಇತ್ತು. ಜನರು ಎಷ್ಟೇ ಹೊಸ ಸೃಷ್ಟಿಗಳನ್ನು ತೆಗಳಿ, ಹಳೆಯದನ್ನು ಎಷ್ಟೇ ಹೊಗಳಿದರೂ– ಈ ಮೊದಲುಮೊದಲಿನ ತೊದಲು ಪ್ರಯತ್ನಗಳಲ್ಲಿ ಇರುವ ಸೌಂದರ್ಯ ತೀರ ಸ್ವಲ್ಪ ಎಂಬುದನ್ನು ಸಂಕೋಚವಿಲ್ಲದೆ ಒಪ್ಪಿಕೊಳ್ಳಬೇಕು.

ದಾರಿಯಲ್ಲಿ ಹೋಗುತ್ತಿದ್ದವರ ಜೊತೆಗೆ ಬಬೂಕನೂ ಸೇರಿಕೊಂಡ. ಹೆಂಗಸರು, ಗಂಡಸರು, ಕೊಳಕರು, ಕುರೂಪಿಗಳು, ಮುಖ ಸಿಂಡರಿಸಿ ಕೊಂಡು ಜೋಬದ್ರ ಕಳೆ ಸುರಿಸಿಕೊಂಡು, ಯಾವುದೋ ಒಂದು ದೊಡ್ಡ ಕಳೆಯಿಲ್ಲದ ಕಟ್ಟಡದೊಳಕ್ಕೆ ಹರಿದು ಹೋಗುತ್ತಿದ್ದರು. ಅಲ್ಲಿನ ಗುಜು ಗುಜು ಎಂಬ ಧ್ವನಿಯನ್ನು ಕೇಳಿ, ಕೆಲವರು ಪ್ರವೇಶಿಸುವ ಮೊದಲು ಬಾಗಿಲಿನಲ್ಲಿ ಹಣಕೊಟ್ಟು ಹೋಗುವುದನ್ನು ಕಂಡು, "ಇದೇನು ಸಂತೆಯ ಮಾಳವೋ?" ಎಂದುಕೊಂಡ ಬಬೂಕ. ಒಳಗೆ ಹೋದ ಮೇಲೆ ಕೆಲವರು ಮೊಣಕಾಲೂರಿ, ಎದುರಿಗೆ ಏನನ್ನೋ ತದೇಕ ಧ್ಯಾನದಿಂದ ನೋಡುವಂತೆ ನಟಿಸಿದರೂ ಕಡೆಗಣ್ಣಿನಿಂದ ಪರಪುರುಷರ ಕಡೆ ದೃಷ್ಟಿ ಚೆಲ್ಲುವುದನ್ನು ಗಮನಿಸಿ, ತಾನು ಬಂದಿರುವುದು ಒಂದು ದೇವಸ್ಥಾನವೆಂದು ಕಂಡುಕೊಂಡ. ಅದೇನು ಅಪಸ್ವರ, ಅದೇನು ಒಡಕು ಶಬ್ದ, ಕರ್ಣ ಕಠೋರವಾಗಿತ್ತು! ಕಾಡುಕತ್ತೆಗಳ ಕೂಗಾಟದಂತಿತ್ತು. ಬಬೂಕನಿಗೆ ಕಿವಿ ಮುಚ್ಚಿಕೊಳ್ಳುವಹಾಗಾಯಿತು. ಅಷ್ಟೇ ಅಲ್ಲ, ಸ್ವಲ್ಪದರಲ್ಲಿಯೇ ಅವನು ಕಣ್ಣು ಮೂಗುಗಳನ್ನು ಕೂಡ ಮುಚ್ಚಿಕೊಳ್ಳುವಹಾಗಾಯಿತು. ಏಕೆಂದರೆ : ಕೆಲವರು ಕಾಮಾಟಿಗಳು ಗುದ್ದಲಿ ಪಿಕಾಸಿ ಹಿಡಿದು, ದೇವಾಲಯದೊಳಗೆ ಬಂದರು; ನೆಲಕ್ಕೆ ಹಾಸಿದ್ದ ಒಂದು ದೊಡ್ಡ ಚಪ್ಪಡಿಕಲ್ಲನ್ನು ಎಬ್ಬಿಸಿ ಎತ್ತಿದರು; ಒಳಗಿನ ಮಣ್ಣನ್ನು ಅಗೆದು, ಎಡಕ್ಕೂ ಬಲಕ್ಕೂ ರಾಶಿಹಾಕಿದರು; ವಾಸನೆಯೋ ದುರ್ವಾಸನೆ; ಆಗ ಇನ್ನು ಕೆಲವರು

ಬಂದರು; ಒಂದು ಹೆಣವನ್ನು ಆ ಹಳ್ಳದ ಒಳಗಿಳಿಸಿ, ಮತ್ತೆ ಮಣ್ಣು ಮುಚ್ಚಿ, ಮೇಲೆ ಚಪ್ಪಡಿ ಹಾಸಿದರು.

"ಅಯ್ಯಯ್ಯೋ! ಹೀಗೂ ಉಂಟೆ? ತಾವು ಎಲ್ಲಿ ತಮ್ಮ ದೇವರನ್ನು ಪೂಜಿಸುತ್ತಾರೆಯೋ ಅಲ್ಲಿಯೇ ತಮ್ಮ ಸತ್ತವರನ್ನೂ ಇವರು ಹೂಳುವರಲ್ಲಾ! ಇವರು ತಮ್ಮ ದೇವಸ್ಥಾನಗಳಿಗೆಲ್ಲಾ ಹೆಣಗಳನ್ನೇ ಹಾಸಿಬಿಡುವರಲ್ಲ! ಈಗ ನನಗೆ ಅರ್ಥವಾಯಿತು: ಈ ಪರ್ಷಿಯಾ ದೇಶದಲ್ಲಿ ಸಾಂಕ್ರಾಮಿಕವಾದ ರೋಗರುಜಿನಗಳು ಏಕೆ ಹೀಗೆ ವೃದ್ಧಿಯಾಗಿವೆ, ಎಂದು! ಇಷ್ಟು ಹೆಣಗಳನ್ನು ಹೀಗೆ ಹುಗಿದರೆ, ಇಷ್ಟು ದುರ್ನಾತ ಹೀಗೆ ಹರಡಿದರೆ, ಇಷ್ಟು ಜನ ಹೀಗೆ ಇಲ್ಲಿ ನೆರೆದರೆ, ವಿಷ ವ್ಯಾಪಿಸಿಕೊಳ್ಳುವುದರಲ್ಲಿ ಏನು ವಿಸ್ಮಯ! ಅಯ್ಯೋ, ನತದೃಷ್ಟವಾದ ಪರ್ಷಿಯದ ರಾಜಧಾನಿಯೆ! ನಿಮ್ಮ ನಾಡಿನ ಅಭಿಮಾನಿದೇವತೆಗಳ ಆಲೋಚನೆ ಸ್ತುತ್ಯವಾದದ್ದೇ! ಇಂತಹ ದರಿದ್ರವನ್ನು ನಾಶಮಾಡಿದಮೇಲೆ ತಾನೆ ಆರೋಗ್ಯವಂತರು ಬೆಳೆಯಬೇಕು, ಲಕ್ಷಣವಾಗಿ ಇರಬೇಕು, ಸುಸ್ವರದಿಂದ ಹಾಡಬೇಕು? ದೈವಕ್ಕೆ ಇಲ್ಲದ ಬುದ್ಧಿ ನಮಗೆಲ್ಲಿ ಬರಬೇಕು? ದೈವಚಿತ್ತದಲ್ಲಿ ಏನಿದೆಯೋ ಡೆಅದು ನಡೆದುಹೋಗಲಿ, ಬಿಡು." ಎಂದು ಬಬೂಕನು ತನಗೆ ತಾನೆ ಹೇಳಿಕೊಂಡನು.

## ಅಧ್ಯಾಯ ಮೂರು

ಈ ನಡುವೆ ಸೂರ್ಯ ಸುಮಾರು ನಡುನೆತ್ತಿಗೆ ಏರಿಬಂದಿದ್ದ. ಬಬೂಕ ಆ ಹೊತ್ತಿಗೆ ನಗರದ ಒಂದು ದೂರದ ಮೂಲೆಯಲ್ಲಿ ಒಬ್ಬಾಕೆಯೊಡನೆ ಊಟಕ್ಕೆ ಹೋಗುವುದೆಂದು ಗೊತ್ತಾಗಿತ್ತು. ಅವಳ ಗಂಡ, ಸೈನ್ಯದಲ್ಲಿ ಒಬ್ಬ ಅಧಿಕಾರಿ, ಬಬೂಕನಿಗೆ ಒಂದು ಪರಿಚಯದ ಪತ್ರ ಕೊಟ್ಟು ಕಳಿಸಿದ್ದ. ಅಲ್ಲಿಗೆ ಹೋಗಬೇಕೆಂದು ಹೊರಟು, ರಾಜಧಾನಿಯ ಬೀದಿಯಲ್ಲಿ ಸುತ್ತಾಡುವಾಗ, ಬಬೂಕ ಇನ್ನೂ ಕೆಲವು ದೇವಾಗಾರಗಳನ್ನು ಕಂಡ. ಅವು ಮೊದಲು ತಾನು ಕಂಡ ದೇಗುಲಕ್ಕಿಂತ ಸುಂದರವಾಗಿದ್ದುವು –ಹೊರಗೂ, ಒಳಗೂ; ಒಳಗೆ ನೆರೆದಿದ್ದ ಭಕ್ತಸಭೆ ತುಂಬ ಸಭ್ಯ

ವಾಗಿತ್ತು, ಗಂಭೀರವಾಗಿತ್ತು; ಅವರ ಹಾಡು ಕಿವಿಗೆ ಜೇನಿನ ಮಳೆ ಯಾಗಿತ್ತು. ದಾರಿಯಲ್ಲಿ ಅಲ್ಲಲ್ಲೇ ನೀರಿನ ಚಿಲುಮೆಗಳನ್ನು ಕಂಡ; ಅವುಗಳನ್ನು ನಿಲ್ಲಿಸಿದ್ದ ರೀತಿ ಸಮರ್ಪಕವಾಗಿರದಿದ್ದರೂ, ಕಣ್ಣಿಗೆ ಚೆಲು ವಾಗಿದ್ದುವು. ಅಲ್ಲಲ್ಲೆ, ಬಯಲಿನಲ್ಲಿ, ಪರ್ಷಿಯಾದ ಪ್ರಾಚೀನ ರಾಜರು ಗಳ ಪ್ರತಿಮೆ, ಕಂಚಿನಲ್ಲಿ ಕಡೆದುವು, ಜೀವಂತವ್ರೋ ಎನ್ನುವಂತೆ ಕಂಗೊ ಳಿಸುತ್ತಿದ್ದುವು. ಅಲ್ಲಲ್ಲೆ ಜನ 'ಇಂತಹ ರಾಜ ನಮಗೆ ಮತ್ತೆ ಎಲ್ಲಿ!' ಎಂದು ಮೆಚ್ಚಿ ನಿಟ್ಟುಸಿರುಬಿಡುತ್ತಿದ್ದರು. ಅಲ್ಲಲ್ಲೇ ಹೊಳೆಗಳ ಎರಡು ದಡಗಳನ್ನು ಒಟ್ಟುಗೂಡಿಸುತ್ತಿದ್ದ ಸೊಗಸಾದ ಸೇತುವೆಗಳನ್ನೂ ಸೋಪಾ ನಗಳನ್ನು ಮಿರುಗಿಸುತ್ತಿದ್ದ ಸ್ನಾನಘಟ್ಟಗಳನ್ನೂ ನೋಡಿದ. ನದಿಯ ದಂಡೆಯಲ್ಲಿದ್ದ ಉಪ್ಪರಿಗೆ ಮನೆಗಳನ್ನು ನೋಡಿದ. ಅಲ್ಲಿಯೇ ನಿರ್ಮಿತ ವಾಗಿದ್ದ ಯುದ್ಧದೇವತೆಯ ಪ್ರಾರ್ಥನಾಮಂದಿರವನ್ನೂ ನೋಡಿದ. ಹಾಗೆ ನೋಡಿಕೊಂಡು, ಕಡೆಗೆ ತನ್ನನ್ನು ಊಟಕ್ಕೆ ಕರೆದಿದ್ದವರ ಮನೆಗೆ ಬಂದ. ಇಷ್ಟರಾದವರ ಒಂದು ಆಯ್ದ ಗುಂಪು ತನಗಾಗಿ ಕಾಯ್ದು ಕೊಂಡಿತ್ತು. ಒಳಗಿನ ಕೊಠಡಿಗಳು ವಿಶಾಲವಾಗಿದ್ದುವು. ರುಚಿರುಚಿ ಯಾಗುವಂತೆ ಅಡಿಗೆ ಸಿದ್ಧವಾಗಿತ್ತು, ಬಂದಿದ್ದವರೆಲ್ಲ ಬಹು ಸೊಗಸಾಗಿ ನಗುನಗುತ್ತ ಮಾತುಕತೆಯಾಡುತ್ತಿದ್ದರು. ಇದನ್ನೆಲ್ಲ ಕಂಡವನು, ಬಬೂಕ, ಕ್ಷಣಕ್ಷಣಕ್ಕೂ ತನಗೆ ತಾನೇ ಹೇಳಿಕೊಳ್ಳುತ್ತಿದ್ದ : "ಇಂತಹ ಸಮ್ಮೋಹನದ ನಗರವನ್ನು ನಾಶಮಾಡಬೇಕೆಂದು ಏನಾದರೂ ಇಥೂರಿ ಯಲ್ ಉದ್ದೇಶಪಟ್ಟರೆ, ಆ ದೇವತೆಗೆ ಸಮಸ್ತ ಜಗತ್ತಿನ ಶಾಪ ತಟ್ಟದೆ ಬಿಡದು; ತಟ್ಟದೆ ಬಿಡದು."

## ಅಧ್ಯಾಯ ನಾಲ್ಕು

ಸ್ವಲ್ಪ ವೇಳೆಯಾಯಿತು. ಮೊದಲು ಮೊದಲು ದೂರದೇಶದಲ್ಲಿ ಹೋಗಿದ್ದ ತನ್ನ ಗಂಡನ ವಿಷಯವನ್ನು ಅಷ್ಟು ಪ್ರೀತಿಯಿಂದ ವಿಚಾರಿ ಸುತ್ತಿದ್ದ ಆ ಮನೆಯಾಕೆ, ಊಟ ಮುಗಿದು ಏಳುವ ವೇಳೆಗೆ, ಅಷ್ಟೇ ಪ್ರೀತಿಯಿಂದ ಮಾತನಾಡಿಸತೊಡಗಿದಳು—ತನ್ನ ಪಕ್ಕದಲ್ಲಿ ಕುಳಿತಿದ್ದ ಬಬ್ಬಾನೊಬ್ಬ ಯುವಕ ಮಂತ್ರವಾದಿಯನ್ನ. ಅಲ್ಲೇ ಒಬ್ಬ ನ್ಯಾಯಾ

ಧಿಪತಿ, ತನ್ನ ಹೆಂಡತಿಯು ಕಣ್ಣೆದುರಿನಲ್ಲಿಯೇ, ಶೃಂಗಾರವಾಗಿದ್ದ ವಿಧವೆಯೊಬ್ಬಳೊಡನೆ ಕೈಮುಟ್ಟಿ ಮೈಮುಟ್ಟಿ ಮಾತನಾಡುತ್ತಿದ್ದ; ವಿಧವೆಯೋ, ಅವನ ಕುತ್ತಿಗೆಯ ಸುತ್ತ ಒಂದು ಕೈಯನ್ನು ಬಳಸಿದ್ದ ಹಾಗೆಯೇ ಇನ್ನೊಂದು ಕೈಯಿಂದ ಬೇರೆ ಯುವಕನೊಬ್ಬನ ಕೈಯನ್ನು ಹಿಡಿದು ಹಿಸುಕುತ್ತಾ ಇದ್ದಳು. ನ್ಯಾಯಾಧಿಪತಿಯ ಹೆಂಡತಿ ಊಟ ಮುಗಿಸಿ ಮೊದಲು ಎದ್ದಳು; ಪಕ್ಕದ ಕೋಣೆಗೆ ಹೋದಳು; ಅಲ್ಲಿ, ಊಟಕ್ಕೆ ತಡವಾಗಿ ಬಂದ ಅರ್ಚಕನೊಬ್ಬ ಕುಳಿತಿದ್ದ; ಅವನು ಅಲ್ಲಿ ಅದೇನು ಹೇಳಿದನೋ, ಅದೇನು ಮಾಡಿದನೋ, ಅವಳು ಮತ್ತೆ ಊಟದ ಕೊಠಡಿಗೆ ಬಂದಾಗ ಅವಳ ಕಣ್ಣು ತೇವವಾಗಿತ್ತು, ಕೆನ್ನೆ ಕೆಂಪಗಾಗಿತ್ತು, ನಡಿಗೆ ಅಸ್ಥಿರವಾಗಿತ್ತು, ನಾಲಿಗೆ ತೊದಲುತ್ತಿತ್ತು.

"ಅಂತೂ, ಇಥೂರಿಯಲ್ ದೇವತೆ ಹೇಳಿದ್ದು ಸರಿಯಾಯಿತು!" ಎಂದು ಬಬೂಕನು ಅಂಜಿದನು. ಯಾರ ನಂಬಿಕೆಯನ್ನಾದರೂ ಸಂಪಾದಿಸಿಕೊಳ್ಳುವ ಸಾಮರ್ಥ್ಯವನ್ನು ಆ ದೇವತೆ ದಾನಮಾಡಿದ್ದ ಕಾರಣದಿಂದ, ಆ ಮನೆಯಾಕೆ ತನ್ನ ಮನಸ್ಸಿನಲ್ಲಿ ಇದ್ದುದನ್ನೆಲ್ಲಾ ಬಬೂಕನಿಗೆ ಮುಚ್ಚಿಡದೆ ಹೇಳಿಕೊಂಡಳು. ತನಗೆ ಆ ಮಂತ್ರವಾದಿಯ ಮೇಲಿದ್ದ ಮೋಹವನ್ನು ಒಪ್ಪಿಕೊಂಡು, ರಾಜಧಾನಿಯ ಯಾವ ಮನೆಯಲ್ಲಿ ನೋಡಿದರೂ ತನ್ನಂತೆಯೇ ತೊಳಲುವ ಜೀವವನ್ನು ಕಾಣಬಹುದೆಂದು ತಿಳಿಸಿದಳು.

ಅದನ್ನು ಕೇಳಿ ಬಬೂಕನಿಗೆ ಎನ್ನಿಸಿತು: "ಇಂಥ ಸಮಾಜ ಬಹುಕಾಲ ಉಳಿಯಲಾರದು. ಈ ಅಸೂಯೆ, ಈ ದ್ವೇಷ, ಈ ವಿರೋಧ, ಇವುಗಳಿಂದ ಗೃಹಜೀವನ ನಾಶವಾಗುತ್ತದೆ. ದಿನವೂ ಎಷ್ಟು ಕಣ್ಣೀರು ಸುರಿಯುತ್ತದೊ! ಎಷ್ಟು ರಕ್ತ ಬಸಿಯುತ್ತದೊ! ಎಷ್ಟು ಗಂಡಂದಿರ ಕೊಲೆಯಾಗುತ್ತದೋ! ಎಷ್ಟು ಜನ ಹೆಂಡಿರ ಹತ್ಯೆಯಾಗುತ್ತದೊ! ಹೀಗೆ ದಿನದಿನವೂ ಕೊಂಚ ಕೊಂಚವಾಗಿ ಮುರಿದು ಮಣ್ಣುಪಾಲಾಗುವುದಕ್ಕಿಂತ, ನಗರವನ್ನು ಇಥೂರಿಯಲ್ ಒಂದೇ ಏಟಿಗೆ ನಾಶಮಾಡಿಬಿಡುವುದೇ ವಾಸಿ! ನಿಜವಾಗಿಯೂ ವಾಸಿ!"

## ಅಧ್ಯಾಯ ಐದು

ಬಬೂಕನು ಹೀಗೆ ವಿಷಾದದಿಂದ ಚಿಂತಿಸುತ್ತಿರಬೇಕಾದರೆ, ಬಾಗಿಲ ಬಳಿ ಒಬ್ಬ ಹಿರಿಯ ವಯಸ್ಸಿನವನು ಬಂದ. ಮುಖಭಾವ ಗಂಭೀರ ವಾಗಿತ್ತು, ಕಪ್ಪು ವಸ್ತ್ರವನ್ನು ಧರಿಸಿದ್ದ. ನ್ಯಾಯಾಧಿಪತಿಯ ಹತ್ತಿರ ಒಂದು ನಿಮಿಷ ಮಾತಾಡಬೇಕೆಂದು ಅಪೇಕ್ಷಿಸಿದ. ನ್ಯಾಯಾಧಿಪತಿ ಯಾದರೋ, ಆ ಬಂದವನ ಕಡೆ ಕೂಡ ನೋಡದೆ, ಕುಳಿತಿದ್ದ ಹಾಗೆಯೇ ಒಂದು ಕಾಗದವನ್ನು ಅವನ ಕಡೆಗೆ ಎಸೆದು, 'ಇನ್ನು ಹೋಗಬಹುದು' ಎಂದುಬಿಟ್ಟ.

"ಈಗ ಬಂದು ಹೋದವನು ಯಾರು?" ಎಂದು ಬಬೂಕ ಕೇಳಿದ

ಆದಕ್ಕೆ ಮನೆಯಾಕೆ ದನಿ ತಗ್ಗಿಸಿ ಮೆಲ್ಲಗೆ ಹೇಳಿದಳು :

"ಅವನು ಈ ನಗರದ ಅತ್ಯಂತ ಬುದ್ಧಿಶಾಲಿಗಳಲ್ಲಿ ಒಬ್ಬ. ಕಳೆದ ಐವತ್ತು ವರ್ಷಗಳಿಂದ ನ್ಯಾಯಾಂಗವನ್ನು ಚೆನ್ನಾಗಿ ಅಭ್ಯಾಸಮಾಡಿ ಕೊಂಡಿದ್ದಾನೆ. ಅದೋ. ಅಲ್ಲಿರುವನಲ್ಲಾ ಆ ನ್ಯಾಯಾಧಿಪತಿ, ಅವನಿ ಗಿನ್ನೂ ಸರಿಯಾಗಿ ಇಪ್ಪತ್ತೈದು ಕೂಡ ತುಂಬಿಲ್ಲ. ಆದರೂ ಎರಡು ದಿನಗಳ ಹಿಂದೆ ಅವನಿಗೆ ಅಧಿಕಾರ ದೊರಕಿತು. ನಾಳೆ ಯಾವುದೋ ವ್ಯವಹಾರವಂತೆ, ಅದಕ್ಕೆ ತೀರ್ಪು ಕೊಡಬೇಕಂತೆ; ಆದ್ದರಿಂದ, ಕಾಗದ ಪತ್ರಗಳನ್ನು ಓದಿಕೊಂಡು ತೀರ್ಪನ್ನು ತಯಾರಿಸುವುದಕ್ಕಾಗಿ, ಈಗ ಬಂದು ಹೋದನಲ್ಲಾ ಅವನನ್ನು ಇವನು ನೇಮಿಸಿಕೊಂಡಿದ್ದಾನೆ."

"ಹೋಗಲಿ; ವಯಸ್ಸು ಚಿಕ್ಕದಾದರೂ, ವಯಸ್ಸಾದವರ ಸಲಹೆ ಯನ್ನು ಕೇಳಬೇಕೆಂಬ ಬುದ್ಧಿಯಾದರೂ ಇರುವುದಲ್ಲಾ! ಅದು ಸರಿ; ಆದರೆ, ಆ ವಯಸ್ಕನನ್ನೇಕೆ ನ್ಯಾಯಾಧಿಪತಿಯಾಗಿ ನೀವು ನೇಮಿಸಿಕೊಳ್ಳ ಬಾರದು?" ಎಂದ, ಬಬೂಕ.

ಮನೆಯಾಕೆ ಎಂದಳು : "ಪರಿಹಾಸ್ಯಮಾಡುವ ಹಾಗಿದೆಯಲ್ಲಾ! ಚಿಕ್ಕಪುಟ್ಟ ಕೆಲಸಗಳಲ್ಲೇ ದುಡಿದು ಮುಪ್ಪಾದವರನ್ನು ದೊಡ್ಡ ಕೆಲಸ ಗಳಿಗೆ ಎಂದಿಗೂ ನೇಮಿಸಿಕೊಳ್ಳುವುದಿಲ್ಲ. ಈ ಯುವಕನ ತಂದೆಗೆ ಬೇಕಾದಷ್ಟು ಐಶ್ವರ್ಯವಿದೆ, ಆದ್ದರಿಂದ ಇವನು ಅಧಿಕಾರ ಪಡೆಯುವುದು

ಸಹಜ. ಈ ದೇಶದಲ್ಲಿ ಹಣ ಕೊಟ್ಟು ಹೇಗೆ ಹೊಲ ಗದ್ದೆಗಳನ್ನು ಕೊಂಡುಕೊಳ್ಳಬಹುದೋ ಹಾಗೆಯೇ ನ್ಯಾಯಾಧಿಪತಿಯ ಪದವಿಯನ್ನು ಕೂಡ ಕೊಂಡುಕೊಳ್ಳಬಹುದು."

"ಅಯ್ಯೋ, ನತದೃಷ್ಟ ನಗರವೇ! ಏನು ಅನಿಷ್ಟ ಪದ್ಧತಿಗಳು! ಸರ್ವನಾಶಕ್ಕೆ ಇದೇ ಕೀಲುಕಲ್ಲು. ಹಣ ಕೊಟ್ಟು ತಮ್ಮ ಅಧಿಕಾರವನ್ನು ಕೊಂಡುಕೊಳ್ಳುವವರು, ಹಣ ತೆಗೆದುಕೊಂಡು ತಮ್ಮ ತೀರ್ಪನ್ನೂ ಮಾರಬಹುದಲ್ಲವೆ? ಇದಕ್ಕಿಂತ ಅಕ್ರಮದ, ಅನ್ಯಾಯದ ಪದ್ಧತಿ ಬೇರೆ ಎಲ್ಲಿಯಾದರೂ ಉಂಟೆ?"

—ಎಂಬುದಾಗಿ ಬಬ್ರೂಕನು ತನ್ನ ಆಶ್ಚರ್ಯವನ್ನೂ ವ್ಯಸನವನ್ನೂ ಪ್ರಕಟಿಸುತ್ತಿರಬೇಕಾದರೆ, ಅಲ್ಲಿದ್ದವನು ಒಬ್ಬ ಯುವಕಯೋಧ, ಅದೇ ಆ ದಿನ ತಾನೆ ಯುದ್ಧರಂಗದಿಂದ ಹಿಂದಿರುಗಿದವನು, ಬಬ್ರೂಕನನ್ನು ಕುರಿತು ಹೀಗೆ ಹೇಳಿದ:

"ನ್ಯಾಯಾಧಿಪತಿಯ ಅಧಿಕಾರಸ್ಥಾನವನ್ನು ಕೊಂಡುಕೊಳ್ಳುವ ವಿಷಯದಲ್ಲಿ ಆಕ್ಷೇಪಣೆ ಏಕಿರಬೇಕು? ಈಗ ನಾನು, ಎರಡು ಸಾವಿರ ಸೈನಿಕರ ಮುಂದೆ ನಿಂತು ಸಾವನ್ನು ಎದುರಿಸುವ ಅಧಿಕಾರಕ್ಕಾಗಿ ರಾಶಿ ಹಣ ಕೊಟ್ಟಿಲ್ಲವೇ? ಕೆಂಪು ವರ್ಣದ ವಸ್ತ್ರವನ್ನು ಧರಿಸಿ, ಈ ಯುದ್ಧದಲ್ಲಿ ಮೂವತ್ತು ದಿವಸ ರಾತ್ರೆ ಬರಿ ನೆಲದಮೇಲೆ ಮಲಗುವ ಸಾಹಸಕ್ಕಾಗಿ ನಾನೇ ನಲವತ್ತು ಸಾವಿರ ಹೊನ್ನು ತೆತ್ತು, ಈ ಸ್ಥಾನವನ್ನು ಸಂಪಾದಿಸಿಲ್ಲವೆ? ನಾನು ಇದುವರೆಗೂ ಕಣ್ಣಿನಿಂದ ನೋಡದೆ ಇರತಕ್ಕ ಪರ್ಷಿಯಾ ಚಕ್ರವರ್ತಿಗೋಸ್ಕರ ಬಾಣದ ಏಟು ತಿಂದು ಜೀವ ಬಿಡಲು ಕೂಡ ಸಿದ್ಧನಾಗಿರಲು ನಾನೇ ಹಣವನ್ನು ಸುರಿದು ಈ ಅಧಿಕಾರ ಕೊಳ್ಳಬಹುದಾದರೆ; ಅರಸನಿಗೆ ಪ್ರತಿನಿಧಿಯಾಗಿ, ದೂರು ತಂದವರ ಅಹವಾಲುಗಳನ್ನು ಕೇಳಿ ತೀರ್ಪು ಕೊಡುವಂಥ ಅಧಿಕಾರಸ್ಥಾನವನ್ನು ಪಡೆಯಲು ಈ ನ್ಯಾಯಾಧಿಪತಿ ಕೂಡ ಏನಾದರೂ ಇಷ್ಟು ದ್ರವ್ಯವನ್ನು ಬೆಲೆಯಾಗಿ ಕೊಡತಕ್ಕದ್ದು ಸರ್ವಥಾ ಯುಕ್ತ."

ಬಬ್ರೂಕನಿಗೆ ರೋಷ ಉಕ್ಕಿಬಂತು. ಶಾಂತಿಕಾಲದ ಅಧಿಕಾರಗಳನ್ನೂ ಯುದ್ಧಕಾಲದ ಅಧಿಕಾರಗಳನ್ನೂ ಹೀಗೆ ಮಾರಾಟದ ಹರಾಜಿನ

ವಸ್ತುಗಳಂತೆ ಎಣಿಸುವ ದೇಶದ ಪದ್ಧತಿಗಳನ್ನು ಮನಸ್ಸಿನಲ್ಲಿಯೇ ತೀವ್ರವಾಗಿ ಖಂಡಿಸಿದ. 'ಈ ಜನಕ್ಕೆ ನ್ಯಾಯಾಂಗದ ವಿಚಾರ, ಯುದ್ಧಾಂಗದ ವಿಷಯ ಶುದ್ಧಾಂಗವಾಗಿ ಗೊತ್ತಿಲ್ಲ' ಎಂದುಕೊಂಡ. 'ಇಥೂರಿಯಲ್ ಒಂದು ವೇಳೆ ಇವರನ್ನು ಮುಟ್ಟದೆ ಹಾಗೇ ಬಿಟ್ಟರೂ, ಇವರು ತಾವೇ ತಮ್ಮ ದುಷ್ಟವಾದ ಪದ್ಧತಿಗಳಿಂದ ನಿರ್ನಾಮವಾಗಿ ಹೋಗುವರು' ಎಂದುಕೊಂಡ.

ಅಷ್ಟು ಹೊತ್ತಿಗೆ ಸರಿಯಾಗಿ, ಇನ್ನಾವನೋ ಒಬ್ಬ, ಬೊಜ್ಜ, ಬಂದು, ಎಲ್ಲರಿಗೂ ಪರಿಚಯದಿಂದ ತಲೆದೂಗಿ, ಆ ಯುವಕ ಯೋಧನ ಹತ್ತಿರ ಬಂದು, ಆವನಿಗೆ ಹೇಳಿದ :

"ನಾನು ಐವತ್ತು ಸಾವಿರ ಹೊನ್ನು ಸಾಲ ಕೊಡಬಲ್ಲೆ, ಅಷ್ಟೆ; ಏಕೆಂದರೆ, ನಿಜ ಹೇಳುವುದಾದರೆ, ಸರಕಾರದ ತೆರಿಗೆಯಿಂದ ನನಗೆ ಆದಾಯಬರುವುದೇ ವರ್ಷಕ್ಕೆ ಮುನ್ನೂರು ಸಾವಿರ ಮಾತ್ರ."

"ಇವನು ಯಾರು? ಆದಾಯ ಸಾಲವೆಂದು ಗೋಗರಗುವವನು ?" ಎಂದು ಬಬೂಕ ಕೇಳಿದ.

"ಪರ್ಷಿಯಾ ದೇಶವನ್ನು ನಲವತ್ತು ಜನ ಪಾಳಯಗಾರರು ಗುತ್ತಿಗೆಗೆ ಹಿಡಿದಿದ್ದಾರೆ. ಆವರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಆದಾಯದಲ್ಲಿ ಒಂದು ದಾಯಭಾಗವನ್ನು ಚಕ್ರವರ್ತಿಗೆ ಸಲ್ಲಿಸುತ್ತಾರೆ" ಎಂದು ಆದಕ್ಕೆ ಉತ್ತರ ಬಂತು.

## ಅಧ್ಯಾಯ ಆರು

ಮಧ್ಯಾಹ್ನದ ಊಟ ಮುಗಿದಮೇಲೆ, ಬಬೂಕನು ಆ ನಗರದ ಅತ್ಯಂತ ಭವ್ಯವಾದ ದೇವಾಲಯಕ್ಕೆ ಹೋದನು. ಅಲ್ಲಿ ಬಂದು ಸೇರಿದ ಹೆಂಗಸರ ಗಂಡಸರ ನಡುವೆ ತಾನೂ ಸೇರಿಕೊಂಡನು. ಅವರೆಲ್ಲರೂ ಅಲ್ಲಿ ಹೊತ್ತು ಕಳೆಯುವುದಕ್ಕಾಗಿ ಬಂದಹಾಗಿತ್ತು. ಅಲ್ಲಿಗೆ ಒಬ್ಬ ಪೂಜಾರಿ ಬಂದ ; ದೊಡ್ಡದೊಂದು ಅಟ್ಟಣೆಯ ಮೇಲೆ ಹತ್ತಿ, ಬೋಧೆ ಮಾಡ ತೊಡಗಿದ. ಪುಣ್ಯವನ್ನೂ ಪಾಪವನ್ನೂ ಕುರಿತು ದೀರ್ಘವಾಗಿ ಭಾಷಣ ಮಾಡಿದ. ವಿಭಾಗ ಮಾಡಬೇಕಾದ ಅವಶ್ಯಕತೆಯಿಲ್ಲದುದನ್ನು ಹತ್ತಾರು

ವಿಭಾಗ ಮಾಡಿ ಹೇಳಿದ; ಸ್ಪಷ್ಟವಾಗಿಯೇ ಇದ್ದುದನ್ನು ಸಯುಕ್ತಿಕವಾಗಿ, ಸಾಧಾರವಾಗಿ ಸ್ಥಾಪಿಸಿದ ; ಎಲ್ಲರೂ ಮೊದಲೇ ತಿಳಿದಿದ್ದುದನ್ನು ಅವರಿಗೆ ಕಲಿಸಿದ. ಕೊಂಚಕೊಂಚವಾಗಿ ಮೆಲ್ಲಮೆಲ್ಲಗೆ ಆವೇಶತಂದುಕೊಂಡ ; ಬೆವರು ಒರಸಿಕೊಳ್ಳುತ್ತ, ಉಸಿರು ಸವರಿಸಿಕೊಳ್ಳುತ್ತ, ಅಟ್ಟಣೆಯಿಂದ ಇಳಿದು ಹೊರಟುಹೋದ. ಆಗ ಸಭೆ ಎಚ್ಚರಗೊಂಡಿತು, ಮಹಾ ಜ್ಞಾನದಾಯಕವಾದ ಉಪದೇಶವನ್ನು ಕೇಳಿದೆವೆಂದು ಭಾವಿಸಿ ಕೊಂಡಿತು.

ಬಬ್ರೂಕನು ಹೇಳಿದ : "ನಿಜವೇ : ಈ ಮನುಷ್ಯ ಬಂದವನು ಏನೋ ತನ್ನ ನಗರದ ಇನ್ನೂರು ಮುನ್ನೂರು ಜನರಿಗೆ ಬೇಸರಪಡಿಸಿ ಹೋದ. ಆದರೆ ಅವನ ಉದ್ದೇಶ ಒಳ್ಳೆಯದು. ಪರ್ಷಿಯಾ ದೇಶ ವನ್ನು ನಾಶಮಾಡಲು ಇದೇನೂ ಸಾಕಷ್ಟು ಕಾರಣವಲ್ಲ."

ಆ ಸಭೆಯಾದ ಮೇಲೆ, ಬಬ್ರೂಕನನ್ನು ಒಂದು ವಿನೋದವನ್ನು ನೋಡುವುದಕ್ಕಾಗಿ ಕರೆದುಕೊಂಡು ಹೋದರು. ಆ ವಿನೋದವನ್ನು ವರ್ಷದಲ್ಲಿ ಪ್ರತಿ ದಿನವೂ ತೋರಿಸುತ್ತಿದ್ದರು. ಆ ವಿನೋದ ನಡೆಯುತ್ತಿದ್ದ ಒಂದು ತುದಿಯಲ್ಲಿ ಒಂದು ಅರಮನೆ ಇದ್ದಹಾಗಿತ್ತು. ಪರ್ಷಿಯಾ ದೇಶದ ಸುಂದರೀವರ್ಗವೆಲ್ಲ, ಮುಖ್ಯಾಧಿಕಾರಿ ವರ್ಗವೆಲ್ಲ ಅಲ್ಲಿ ಬಂದು ಸಾಲುಸಾಲಾಗಿ ಕುಳಿತಿದ್ದರು. ಆ ನೋಟವೇ ಕಣ್ಣು ಕೋರೈಸುವಂತಿತ್ತು. ಅದನ್ನು ನೋಡಿ, ಇನ್ನು ನೋಡಬೇಕಾದುದು ಏನೂ ಇಲ್ಲ ಎಂದು ಬಬ್ರೂಕನು ಭಾವಿಸಿಕೊಂಡನು. ಆಗ ಇಬ್ಬರು ಮೂವರು, ರಾಜರೋ ರಾಣಿಯರೋ ಎಂಬಂತೆ ಇದ್ದವರು, ಆ ಅರ ಮನೆಯ ದೊಡ್ಡ ಬಾಗಿಲಿನ ಹತ್ತಿರ ಕಾಣಿಸಿಕೊಂಡರು; ಅವರ ಭಾಷೆ ಉಳಿದ ಜನರ ಭಾಷೆಗಿಂತ ಭಿನ್ನವಾಗಿತ್ತು ; ಅಳೆದ ಮಾತು, ಸಮರಸ ವಾದ ಮಾತು, ಭವ್ಯವಾದ ಮಾತು. ಯಾರೂ ನಿದ್ರಿಸಲಿಲ್ಲ, ಎಲ್ಲಾ ಗಂಭೀರವಾಗಿ ನಿಶ್ಶಬ್ದದಿಂದ ಕಿವಿಕೊಟ್ಟು ಕೇಳಿದರು ; ಮಧ್ಯೆ ಮಧ್ಯೆ ಭಾವಸೂಚಕವಾದ ಮೆಚ್ಚುಗೆಯ ಉದ್ಗಾರಗಳನ್ನು ಎಳೆದರು. ರಾಜರು ಗಳ ಕರ್ತವ್ಯ, ಸದ್ಗುಣಗಳ ಪ್ರೀತಿ, ರಾಗಾದಿಗಳ ಅಪಾಯ ಇವುಗಳನ್ನು ಕುರಿತ ಮಾತುಗಳನ್ನು ಕೇಳುತ್ತಾ ಬಬ್ರೂಕನ ಕಣ್ಣಲ್ಲಿ ನೀರು ತುಂಬಿತು,

'ಇವರೇ ನಾಯಕರು, ನಾಯಕಿಯರು. ಇವರೇ ರಾಜ್ಯಕ್ಕೆ ಮಾರ್ಗ ದರ್ಶಿಗಳು. ಇದರಲ್ಲಿ ಏನೂ ಸಂದೇಹವಿಲ್ಲ' ಎಂದುಕೊಂಡ, ಬಬೂಕ. "ಏನಾದರೂ ಮಾಡಿ, ಇಥೂರಿಯಲನನ್ನು ಇಲ್ಲಿಗೆ ಕರೆದು ತರಬೇಕು. ಅವನು ಈ ಮಾತು ಕೇಳಬೇಕು. ಆಗ ಅವನಿಗೆ ಈ ಪರ್ಷಿಯಾದೇಶದ ಮೇಲೆ ಪ್ರೀತಿ ಉಂಟಾಗುತ್ತದೆ" ಎಂದುಕೊಂಡ.

ವಿನೋದವೆಲ್ಲ ಮುಗಿದಮೇಲೆ, ಆ ಸುಂದರವಾದ ಅರಮನೆಯಲ್ಲಿ ಅಂತಹ ಉದಾತ್ತವಾದ ಭಾವನೆಗಳನ್ನು ಅಷ್ಟು ಸ್ವಚ್ಛವಾದ ನುಡಿಗಳಲ್ಲಿ ನುಡಿಸಿತಂದ ಆ ಪ್ರಮುಖ ರಾಣಿಯನ್ನು ನೋಡಲು ಇಚ್ಛೆಪಟ್ಟ. ಅವನನ್ನು ಅವಳ ಬಳಿಗೆ ಕರೆದುಕೊಂಡು ಹೋದರು. ಅವಳಿದ್ದದ್ದು ಎರಡನೆಯ ಅಂತಸ್ತಿನಲ್ಲಿ. ಅಲ್ಲಿಗೆ ಹತ್ತಿಹೋಗುವ ಮೆಟ್ಟಿಲೋ ಇಕ್ಕಟ್ಟು. ಅಲ್ಲಿ ಹೋದರೆ--ಕೊಳಕು ಕೊಳಕಾದ ಕೋಣೆ, ಅಲ್ಲಿ ಒಬ್ಬಳು ಹರಕು ವಸ್ತ್ರದ ಹೆಂಗಸು. ಅವಳು ಬಹು ಗಂಭೀರವಾಗಿ, ಖಿನ್ನತೆಯಿಂದ ಹೇಳಿದಳು :

"ನನಗೆ ಈ ವೃತ್ತಿಯಿಂದ ಬರುವುದು ಹೊಟ್ಟೆಗೆ ಕೂಡ ಸಾಲದು. ನೀನು ಈಗ ತಾನೆ ನೋಡಿಗೆಯಲ್ಲಾ ಒಬ್ಬ ರಾಜಕುಮಾರನನ್ನ— ಅವನಿಂದಾಗಿ ನಾನು ಗರ್ಭಿಣಿಯಾಗಿದ್ದೇನೆ. ಇನ್ನು ಕೆಲವು ದಿನಕ್ಕೆ ಪ್ರಸವವಾಗಬೇಕು. ನನಗೋ ಕೈಲಿ ಕಾಸಿಲ್ಲ. ಕಾಸಿಲ್ಲದೆ ಏನು ಮಾಡ ಬೇಕೋ ನಾ ಬೇರೆ ಕಾಣೆ."

ಬಬೂಕನು ಅವಳಿಗೆ ಕೈ ತುಂಬ ಚಿನ್ನದ ನಾಣ್ಯ ತುಂಬಿ, ತನಗೆ ತಾನೇ ಹೀಗೆಂದುಕೊಂಡ :

"ಈ ಊರಿನಲ್ಲಿ ಇದಕ್ಕಿಂತ ಕೇಡಾದದ್ದು ಬೇರೇನೂ ಇಲ್ಲದಿದ್ದರೆ, ಇಥೂರಿಯಲ್ ಇಷ್ಟು ಕೋಪಿಸಿಕೊಂಡಿರುವುದು ತೀರ ಅನ್ಯಾಯ."

ಅದಾದ ಮೇಲೆ, ಜೊತೆಗೊಬ್ಬ ಜಾಣನನ್ನು ಕರೆದುಕೊಂಡು, ಪೇಟೆ ಬೀದಿಗೆ ಹೊರಟ. ಅಂಗಡಿಗಳಲ್ಲಿ ಕಂಡ ಕೆಲವು ಪದಾರ್ಥಗಳನ್ನು, ತನಗೆ ಅದೇನೂ ಅವಶ್ಯಕವಲ್ಲದಿದ್ದರೂ, ಸುಮ್ಮನೆ ಕೊಂಡುಕೊಂಡ. ಅಂಗಡಿಯವನು, (ಅದೇನು ನಯ! ಅದೇನು ವಿನಯ!) ಅವನು ಕೇಳಿದ್ದನ್ನು ಇವನಿಗೆ ಮಾರಿದ. ಬಬೂಕ ಮನೆಗೆ ಹಿಂದಿರುಗಿದ ಮೇಲೆ

ಅವನ ಗೆಳೆಯ ಹೇಳಿದ: "ಹೀಗೆ ಹೀಗೆ, ನೋಡು: ನಿನಗೆ ಅವನು ಇಷ್ಟಿಷ್ಟು ಮೋಸಮಾಡಿದ್ದಾನೆ." ಬಬೂಕ ಆ ವ್ಯಾಪಾರಿಯ ಹೆಸರನ್ನು ಗುರುತು ಬರೆದುಕೊಂಡ: ಇಥೂರಿಯಲ್ ಈ ಊರನ್ನು ನಾಶಮಾಡುವ ಕಾಲಕ್ಕೆ ಇವನಿಗೆ ವಿಶೇಷ ರೀತಿಯ ಶಿಕ್ಷೆ ಮಾಡಿಸುತ್ತೇನೆ, ಎಂದು. ಅವನು ಅದನ್ನು ಬರೆಯುತ್ತಿರುವಾಗಲೇ ಯಾರೋ ಹೊರಗೆ ಬಾಗಿಲು ತಟ್ಟಿದರು; ತೆರೆದರೆ, ಆ ವ್ಯಾಪಾರಿಯೇ ಒಳಗೆ ಬಂದ. "ಇದೋ, ಈ ಹಣದ ಚೀಲವನ್ನು ನಮ್ಮ ಅಂಗಡಿಯಲ್ಲಿ ಮರೆತು ಬಂದಿರಿ" ಎಂದು ಅದನ್ನು ಒಪ್ಪಿಸಿದ.

ಕೇಳಿದ ಬಬೂಕ: "ಇದೇನಿದು, ವಿಚಿತ್ರ? ಇಷ್ಟು ಸತ್ಯವಂತನಾದ ನೀನು ನನಗೆ ಆ ಕೆಲಸಕ್ಕೆ ಬಾರದ ವಸ್ತುಗಳನ್ನೆಲ್ಲಾ ಅಷ್ಟು ದುಬಾರಿ ಬೆಲೆಗೆ ಮಾರಿ ಮೋಸಮಾಡಲು ಹೇಗೆ ಮನಸ್ಸು ಬಂತು? ಒಂದಕ್ಕೆ ನಾಲ್ಕು ಬೆಲೆ ಹಾಕಿದ್ದೀಯಂತಲ್ಲಾ?"

ಅಂಗಡಿಯವನು ಹೇಳಿದ: "ಈ ಊರಿನಲ್ಲಿ ಯಾವ ಹೆಸರುವಾಸಿಯಾದ ವ್ಯಾಪಾರಿಯಾದರೂ ನಿನ್ನ ಹಣದ ಚೀಲವನ್ನು ತಂದು ತಲುಪಿಸದೆ ಇರುತ್ತಿರಲಿಲ್ಲ. ಆದರೆ, ನಾನು ಒಂದಕ್ಕೆ ನಾಲ್ಕು ಬೆಲೆ ವಸೂಲು ಮಾಡಿರುವೆನೆಂದು ಹೇಳಿದವರು ಮಾತ್ರ ನಿನಗೆ ತುಂಬಾ ಮೋಸಮಾಡಿದ್ದಾರೆ. ನಿಜವಾಗಿ ನಾನು ಒಂದಕ್ಕೆ ಹತ್ತು ವಸೂಲುಮಾಡಿದ್ದೇನೆ. ಇದನ್ನೇ ನೀನು ಇನ್ನು ನಾಲ್ಕು ವಾರದನಂತರ ಮಾರಲು ಹೋದರೆ, ಇದರಲ್ಲಿ ಹತ್ತರ ಒಂದು ಪಾಲು ಕೂಡ ನಿನಗೆ ಹಣ ಹಿಂದಕ್ಕೆ ಬರುವುದಿಲ್ಲ. ಆದರೂ ಇದರಲ್ಲಿ ಅನ್ಯಾಯವೇನಿಲ್ಲ. ಜನರಿಗೆ ಯಾವ ಕ್ಷಣ ಯಾವುದರ ಮೇಲೆ ಕಣ್ಣಾಗುವುದೋ ಅದಕ್ಕೆ ಆ ಕ್ಷಣದಲ್ಲಿ ಆ ಬೆಲೆ, ಅಷ್ಟೆ. ಈ ಕ್ಷಣದ ರುಚಿಯಿಂದಲೇ ನಾನು ಈ ಹಾಳು ಮೂಳು ತಯಾರಿಸಿಡುವುದಕ್ಕಾಗಿ ಈ ನೂರಾರು ಜನರನ್ನು ಸಂಬಳಕ್ಕೆ ನೇಮಿಸಿಕೊಂಡಿರುವುದು; ಇದರಿಂದಲೇ ನನಗೆ ನನ್ನ ಉಪ್ಪರಿಗೆ ಮನೆ, ನನ್ನ ಕುದುರೆ ಗಾಡಿ, ಇವೆಲ್ಲಾ. ಇದರಿಂದಲೇ ಕೈಗಾರಿಕೆಯ ಅಭಿವೃದ್ಧಿ, ಅಭಿರುಚಿಯ ಅಭಿವೃದ್ಧಿ, ವ್ಯಾಪಾರ ಸಾಪಾರ, ಸರ್ವ ಸಂಪತ್ತು. ಇದೇ ಹಾಳುಮೂಳುಗಳನ್ನೇ ನಾನು ನೆರೆಹೊರೆಯ ರಾಷ್ಟ್ರಗಳಿಗೆ ಇದಕ್ಕಿಂತ

ಹೆಚ್ಚಿನ ಬೆಲೆಗೆ ಮಾರುತ್ತೇನೆ. ಇದರಿಂದ ನಾನೂ ನನ್ನ ದೇಶಕ್ಕೆ ಸೇವೆಯನ್ನು ಸಲ್ಲಿಸುತ್ತೇನೆ."

ಬಬೂಕ ಒಂದು ಕ್ಷಣ ಆಲೋಚನೆ ಮಾಡಿ, ತಾನು ಗುರುತು ಮಾಡಿದ್ದ ಅವನ ಹೆಸರನ್ನು ಹೊಡೆದುಹಾಕಿದ.

"ಏನೇ ಆದರೂ, ಈ ಕೈಗಾರಿಕೆಗೆ ಬೇಕಾದ ಕುಶಲತೆ ಬೆಳೆದಿರುವುದರಿಂದಲೇ ಅಲ್ಲವೇ ಈ ಹಾಳು ಮೂಳು ತಯಾರಾಗುವುದು! ಇದರಿಂದಲೇ ಅಲ್ಲವೇ ಜನರಲ್ಲಿ ಅಷ್ಟೋ ಇಷ್ಟೋ ಹಣ ಕಾಸು ಓಡಿಯಾಡುವುದು! ಇಥೂರಿಯಲ್ ಏಕೋ ಸ್ವಲ್ಪ ದುಡುಕು ಎಂದು ಕಾಣುತ್ತದೆ." ಎಂದುಕೊಂಡ.

## ಅಧ್ಯಾಯ ಏಳು

ಪರ್ಷಿಯಾ ದೇಶವನ್ನು ಕುರಿತು ಏನು ವರದಿ ಒಪ್ಪಿಸಬೇಕೆಂದು ಬಬೂಕನಿಗೆ ತೋಚಲಿಲ್ಲ. ಆದೇ ಊರಿನ ವಿರಕ್ತರನ್ನೂ ಶಾಸ್ತ್ರಿಗಳನ್ನೂ ಪಂಡಿತರನ್ನೂ ಕಂಡುಬರುವುದೆಂದು ನಿಶ್ಚಯಿಸಿದ. ಏಕೆಂದರೆ : ವಿರಕ್ತರು ಧರ್ಮವನ್ನು ತಿಳಿದವರು, ಪಂಡಿತರು ಜ್ಞಾನಿಗಳು; ಇವರು ಉಳಿದ ಜನಕ್ಕೆ ಕ್ಷಮಾಭಿಕ್ಷೆಯನ್ನು ದೊರಕಿಸಿಕೊಡಬಹುದು, ಎಂದು.

ಮಾರನೆಯ ಬೆಳಗ್ಗೆ ವಿರಕ್ತರ ಮಠಕ್ಕೆ ಹೋದ. ಅಲ್ಲಿನ ಮುಖ್ಯ ವಿರಕ್ತ ಒಪ್ಪಿಕೊಂಡ : "ಈ ವಿರಕ್ತನಾದದ್ದರಿಂದ ನನಗೆ ಒಂದು ನೂರು ಸಾವಿರ ಹೊನ್ನಿನ ವರಮಾನವಿದೆ; ಸಂಸಾರತ್ಯಾಗ ಮಾಡಿದ ಕಾರಣದಿಂದ ಸುತ್ತುಮುತ್ತಿನ ಸಂಸಾರಗಳೆಲ್ಲ ನಾನು ಹೇಳಿದಂತೆ ಕೇಳುತ್ತಿವೆ." ಹೀಗೆಂದು ಹೇಳಿ, ಬಬೂಕನಿಗೆ ಮಠವನ್ನು ತೋರಿಸಿಬರುವಂತೆ ಇನ್ನೊಬ್ಬ ವಿರಕ್ತನಿಗೆ ಅವನನ್ನು ಒಪ್ಪಿಸಿ, ಮುಖಂಡ ಹೊರಟುಹೋದ.

ಬಬೂಕನು ಮಠವನ್ನೆಲ್ಲಾ ನೋಡಿಕೊಂಡು ಬರುತ್ತಿರುವಾಗ, ಮಠದಲ್ಲಿ ಸುದ್ದಿ ಹಬ್ಬಿತು : "ಇವನು ವಿರಕ್ತ ಮಠಗಳನ್ನು ಸುಧಾರಿಸುವುದಕ್ಕೆ ಬಂದಿದ್ದಾನೆ!" ಆ ಕೂಡಲೆ ಮಠದಲ್ಲಿದ್ದ ಪ್ರತಿಯೊಬ್ಬನೂ ಒಂದೊಂದು ಅಹವಾಲು ತಂದು ಒಪ್ಪಿಸಿದ : "ನಮ್ಮನ್ನು ಉಳಿಸು; ಉಳಿದವರನ್ನು ನಾಶಮಾಡು." ಎಂದು.

ಅವರು ಪ್ರತಿಯೊಬ್ಬರೂ ತಮ್ಮ ತಮ್ಮ ಪರವಾಗಿ ಹೇಳಿಕೊಂಡದ್ದನ್ನು ನೋಡಿದರೆ, ಈ ವಿರಕ್ತ ಸಂಸ್ಥೆಗಳನ್ನೆಲ್ಲಾ ಸಂರಕ್ಷಿಸುವುದು ಅಗತ್ಯ; ಆದರೆ ಪ್ರತಿಯೊಬ್ಬರೂ ಇನ್ನೊಬ್ಬರಿಗೆ ವಿರೋಧವಾಗಿ ಹೇಳಿದ್ದನ್ನು ನೋಡಿದರೆ, ಈ ಸಂಸ್ಥೆಗಳನ್ನೆಲ್ಲಾ ಸಮೂಲವಾಗಿ ನಾಶಮಾಡಬೇಕಾದದ್ದು ಅಗತ್ಯ.

ಅವರಲ್ಲಿ ಪ್ರತಿಯೊಬ್ಬನೂ ಜಗತ್ತಿನ ಭಾರವನ್ನು ಕಡಮೆ ಮಾಡುವುದಕ್ಕೋಸ್ಕರ ತಾನೇ ಮಠದ ಮುಖಂಡನಾಗಬೇಕೆಂದು ಆಸೆಪಟ್ಟಿದ್ದನ್ನು ಕಂಡು, ಬಬೂಕನಿಗೆ ಆಶ್ಚರ್ಯವಾಯಿತು.

ಆಗ ಒಬ್ಬ ಅರ್ಧವಿರಕ್ತ ಮುಂದೆ ಬಂದು, ಹೇಳಿದ: "ಆಗಬೇಕಾದುದು ಆಗುತ್ತದೆ ಎಂಬುದು ಸ್ಪಷ್ಟ. ಏಕೆಂದರೆ, ಸೈತಾನನ ಅವತಾರವಾಗಿದೆ. ಸಣ್ಣ ಮಕ್ಕಳು ಕೂಡ ಭವಿಷ್ಯ ನುಡಿಯತೊಡಗಿದ್ದಾರೆ. ಜಗತ್ತಿನ ಕಡೆಗಾಲ ಸಮೀಪಿಸುತ್ತಿದೆ. ದಯಮಾಡಿ, ಆ ಮಹಾಲಾಮನನ್ನು ಅಡಗಿಸಿ, ನಮ್ಮನ್ನು ಕಾಪಾಡಲಾರೆಯಾ?"

"ಏನಿದು ಹುಚ್ಚುಮಾತು? ಮಹಾಲಾಮನನ್ನೆ? ತಿಬೆಟ್ ದೇಶದ ಧರ್ಮರಾಜನನ್ನು ಅಡಗಿಸಬೇಕೆ?" ಎಂದ, ಬಬೂಕ.

"ಹೌದು, ಅವನನ್ನೆ. ಬೇರೆ ಯಾರನ್ನೂ ಅಲ್ಲ" ಎಂದ, ಅರ್ಧವಿರಕ್ತ, ಖಂಡಿತದ ದನಿಯಲ್ಲಿ.

"ಹಾಗಾದರೆ, ಅವನ ಮೇಲೆ ಯುದ್ಧಮಾಡುತ್ತೀರೊ? ನಿಮಗೆ ಸೈನ್ಯಗಳುಂಟೊ?" ಎಂದು ಕೇಳಿದ, ಬಬೂಕ.

"ಇಲ್ಲ. ಆದರೂ ನಾವು ಅವನಿಗೆ ವಿರುದ್ಧವಾಗಿ ಮೂರು ನಾಲ್ಕು ಸಾವಿರ ಮಹಾ ಗ್ರಂಥಗಳನ್ನು ಬರೆದಿದ್ದೇವೆ; ಅದನ್ನು ಯಾರೂ ಓದುವುದಿಲ್ಲ. ಅಷ್ಟೇ ಸಂಖ್ಯೆಯ ಪುಟ್ಟ ಪುಸ್ತಕಗಳನ್ನೂ ಪ್ರಕಟಿಸಿದ್ದೇವೆ; ನಮ್ಮ ಬಲವಂತಕ್ಕೆ ಅದನ್ನು ಕೆಲವು ಹೆಣ್ಣು ಮಕ್ಕಳು ಓದುತ್ತಾರೆ. ನಮ್ಮ ವಿಷಯ ಅವನಿಗೇನೂ ಗೊತ್ತಿಲ್ಲದಿದ್ದರೂ ನನಗೆ ಅವನು ಬಹಿಷ್ಕಾರ ಹಾಕಿದ್ದಾನಂತೆ—ತೋಟದಲ್ಲಿರುವ ಕಂಬಳಿ ಹುಳಗಳನ್ನು ಕಳೆದುಹಾಕಿ, ಎಂದು ತೋಟಗಾರ ಹೇಳುವ ಹಾಗೆ."

ವಿರಕ್ತರೆಂದೂ ಜ್ಞಾನಿಗಳೆಂದೂ ಹೆಸರಾದವರ ಮೌಢ್ಯವನ್ನು ಕಂಡು ಬಬೂಕ ನಡುಗಿದ. ಸಂಸಾರತ್ಯಾಗಮಾಡಿದವರ ಕುತಂತ್ರಗಳನ್ನೂ ವಿನಯ ತ್ಯಾಗಗಳನ್ನು ಬೋಧಿಸುವವರ ಸ್ವಾರ್ಥ ದುರಾಶೆಗಳನ್ನೂ ಕಂಡು, ಹೆದರಿದ. "ಹೀಗಾದರೆ, ಇಥೂರಿಯಲ್ ಇವರಲ್ಲಿ ಒಂದು ಪಿಳ್ಳೆಯನ್ನೂ ಉಳಿಸುವುದಿಲ್ಲ" ಎಂದುಕೊಂಡ.

## ಅಧ್ಯಾಯ ಎಂಟು

ಬಬೂಕ ತನ್ನ ಬಿಡಾರಕ್ಕೆ ಹಿಂದಿರುಗಿದ ತನ್ನ ಉದ್ವೇಗವನ್ನು ಶಮನಮಾಡುವುದಕ್ಕಾಗಿ ಕೆಲವು ಹೊಸ ಪುಸ್ತಕಗಳನ್ನು ತರಿಸಿಕೊಂಡ. ನಗುನಗುತ್ತಾ ಸಂತೋಷವಾಗಿರೋಣವೆಂದು ಕೆಲವರು ಸಾಹಿತಿಗಳನ್ನು ಊಟಕ್ಕೆ ಕರೆಸಿಕೊಂಡ. ಇವನು ಕರೆದದ್ದಕ್ಕೆ ಎರಡರಷ್ಟು ಜನ ಬಂದರು---ಜೇನು ತುಪ್ಪಕ್ಕೆ ಕಣಜಗಳು ಮುತ್ತುವ ಹಾಗೆ. ಈ ಪರ ಪುಷ್ಟಗಳಿಗೆ ತಿನ್ನುವುದಕ್ಕೆ ಎಷ್ಟು ಆತುರವೋ ಮಾತನಾಡುವುದಕ್ಕೂ ಅಷ್ಟೇ ಆತುರ ; ಅವರು ಇಬ್ಬರನ್ನು ಮಾತ್ರ ಪ್ರಶಂಸೆ ಮಾಡುತ್ತಿದ್ದರು--ಸತ್ತುಹೋದವರನ್ನು ಮತ್ತು ತಮ್ಮತಮ್ಮನ್ನು. ಮರೆತಾದರೂ ಸಮಕಾಲೀನರ ಗುಣವರ್ಣನೆ ಮಾಡುತ್ತಿರಲಿಲ್ಲ—ತಮ್ಮ ಅನ್ನದಾತ ಒಬ್ಬ ಹೊರತು. ಅವರಲ್ಲಿ ಯಾವನಾದರೂ ಒಬ್ಬ ಒಂದು ಚಮತ್ಕಾರದ ಮಾತನಾಡಿದರೆ, ಮಿಕ್ಕವರ ಮುಖ ಮಂಕಾಗುತ್ತಿತ್ತು ; ಅಯ್ಯೋ, ಇದು ನನಗೆ ಹೊಳೆಯಲಿಲ್ಲವಲ್ಲಾ, ಎಂದು ತುಟಿ ಕಡಿದುಕೊಳ್ಳುತ್ತಿದ್ದರು. ಆದರೂ, ಅವರು ವಿರಕ್ತರ ಹಾಗೆ, ತಮ್ಮ ಮನಸ್ಸಿನಲ್ಲಿದ್ದುದನ್ನು ಮುಚ್ಚಿಕೊಳ್ಳುತ್ತಿರಲಿಲ್ಲ. ಅವರಲ್ಲಿ ಪ್ರತಿಯೊಬ್ಬನೂ ಆ ಕೆಲಸ, ಈ ಕೆಲಸ, ಆ ಅಧಿಕಾರ, ಈ ಅಧಿಕಾರ, ಎಂದು ಬೇಡಿಕೊಂಡರೂ ತಾವು ತುಂಬಾ ಅಭಿಮಾನಿಗಳೆಂದು ಭಾವಿಸಿಕೊಂಡಿದ್ದರು. ಒಬ್ಬರಿಗೊಬ್ಬರು ಮುಖ ಮುರಿದಂತೆ ಮಾತನಾಡುತ್ತಿದ್ದರು ; ಆದರೂ ಅದನ್ನೇ ಪರಮ ಬುದ್ಧಿವಂತಿಕೆ ಎಂದು ತಿಳಿದಿದ್ದರು. ಬಬೂಕನು ಏಕೆ ಬಂದಿದ್ದಾನೆ ಎಂಬುದನ್ನು ಕೊಂಚ ತಿಳಿದವನೊಬ್ಬನು ಬೇಡಿಕೊಂಡ : "ಐದು ವರ್ಷದ ಹಿಂದೆ, ನನ್ನನ್ನು ಎಷ್ಟು ಕೀರ್ತಿಸಬೇಕೋ ಅಷ್ಟು ಕೀರ್ತಿಸದವನು

ಇಂಥವನು ಇದ್ದಾನೆ. ಅವನನ್ನು ನಾಶವಮಾಡುವಂತೆ ಹೇಳು" ಎಂದು. "ನನ್ನ ನಾಟಕ ಆಡಿದಾಗ ಇವನು ನಕ್ಕ; ಇವನನ್ನು ನಾಶವಮಾಡಿಸು" ಎಂದು ಇನ್ನೊಬ್ಬ ಬೇಡಿದ. "ಈ ವಿದ್ಯಾ ಸಂಸ್ಥೆಗೆ ನನಗೆ ಪ್ರವೇಶ ಕೊಡಲಿಲ್ಲ. ಅದನ್ನು ಹಾಳುಮಾಡಿಸು" ಎಂದು ಮತ್ತೊಬ್ಬ. ಇನ್ನೂ ಹೀಗೇ. ಊಟ ಮುಗಿದಮೇಲೆ ಎಲ್ಲರೂ ಎದ್ದು ಹೊರಟರು. ಹೊರಟವರೆಲ್ಲ ಒಂಟೊಂಟಿಯಾಗಿ ಹೊರಟರು. ಅನ್ನ ಹಾಕಿದವನ ಮನೆಯ ಹೊರಗಡೆ, ಒಬ್ಬನಿಗೆ ಇನ್ನೊಬ್ಬನ ಮುಖ ಕಂಡರಾಗುತ್ತಿರಲಿಲ್ಲ.

"ಈ ಕ್ರಿಮಿಕೀಟಗಳ ಕೊಂಪೆ ಸರ್ವನಾಶವಾಗಿ ಹೋದರೆ ಏನೇನೂ ನಷ್ಟವಿಲ್ಲ." ಎಂದುಕೊಂಡ, ಬಬೂಕ.

## ಅಧ್ಯಾಯ ಒಂಬತ್ತು

ಅವರೆಲ್ಲರೂ ತೊಲಗಿಹೋದ ಮೇಲೆ, ಬಬೂಕ, ತಾನು ತರಿಸಿಕೊಂಡ ಕೆಲವು ಹೊಸ ಪುಸ್ತಕಗಳನ್ನು ಹಾಗೇ ತೆರೆದು ಓದಿದ. ಊಟಕ್ಕೆ ಬಂದಿದ್ದವರ ರಾಗದ್ವೇಷಗಳೇ ಆ ಪುಸ್ತಕಗಳೊಳಗೂ ಪ್ರತಿಬಿಂಬಿತವಾವಾಗಿದ್ದುವು. ಆ ಬೈಗುಳಿನ ಬೃಹದ್ ಗ್ರಂಥಗಳನ್ನು ನೋಡಿದ; ಹೊಟ್ಟೆಕಿಚ್ಚು, ಚಾಡಿ, ಕ್ಷುದ್ರ, ಬಡತನ ಇವುಗಳಿಂದ ಹುಟ್ಟಿಬಂದ ಆ ಬರಹಗಳನ್ನು ಓದಿದ; ಗಿಡಗನನ್ನು ಗೌರವದಿಂದ ಕಂಡು, ಪಾರಿವಾಳವನ್ನು ಕಿತ್ತು ಹಿರಿದು ಹಾಕುವಂಥ ಆ ಹೇಡಿಕವನಗಳನ್ನು ತಿರುವಿಹಾಕಿದ; ತಾವು ಎಂದೂ ಕಂಡರಿಯದ ಸ್ತ್ರೀಯರನ್ನು ಚಿತ್ರಿಸುತ್ತೇವೆಂದು ಹೊರಟ ಆ ಕಲ್ಪನಾವಿಹೀನವಾದ ಕಾದಂಬರಿಗಳ ಮೇಲೆ ಕಣ್ಣಾಡಿಸಿದ.

ಕಟ್ಟಕಡೆಗೆ ಆ ಅಸಹ್ಯದ ಬರಹಗಳನ್ನೆಲ್ಲಾ ಬೆಂಕಿಗೆ ಎಸೆದು. ಸಂಜೆ ಸುತ್ತಾಡಿಕೊಂಡು ಬರೋಣವೆಂದು ಎದ್ದು ಹೊರಟ. ಅಲ್ಲಿ ಒಬ್ಬ ಮುದಿ ವಿದ್ವಾಂಸನ ಪರಿಚಯವಾಯಿತು. ಆತ ಮಧ್ಯಾಹ್ನ ಕೂಳಿಗೆ ಬಂದವರಂತೆ ಬಂದಿರಲಿಲ್ಲ. ಅವನು ಎಂದೂ ಅವರ ಜೊತೆ ಸೇರುತ್ತಿರಲಿಲ್ಲ. ಜನರ ಸ್ವಭಾವಗಳು ಅವನಿಗೆ ಚೆನ್ನಾಗಿ ಗೊತ್ತಿತ್ತು. ಯಾರ ಹತ್ತಿರ ಏನು ಮಾತನ್ನಾಡಬೇಕು ಎಂಬುದನ್ನು ಅವನು ಬಲ್ಲ. ಅವನ ಹತ್ತಿರ ಬಬೂಕನು ತಾನು ಓದಿದ್ದನ್ನೆಲ್ಲ, ತಾನು ಕಂಡದ್ದನ್ನೆಲ್ಲ ಕುರಿತು ಹೇಳಿಕೊಂಡ.

"ಸತ್ತ್ವವಿಲ್ಲದ್ದನ್ನು ಓದುತ್ತಿದ್ದೀಯೆ. ತಿರಸ್ಕರಿಸಲು ತಕ್ಕದ್ದನ್ನು ಓದುತ್ತಿದ್ದೀಯೆ" ಎಂದ ಆ ಬುದ್ಧಿಶಾಲಿ. "ಆದರೆ ಎಲ್ಲ ಕಾಲದಲ್ಲೂ, ಎಲ್ಲಾ ಕ್ಷೇತ್ರದಲ್ಲೂ ಹೀಗೇ : ಅಯೋಗ್ಯರ ಸಂಖ್ಯೆಯೇ ಅಪಾರ, ಯೋಗ್ಯರು ತುಂಬ ವಿರಳ. ನಿನ್ನ ಹತ್ತಿರ ಬಂದವರೆಲ್ಲಾ ನೀರ ಮೇಲಿನ ಕಸಕಡ್ಡಿಯಂಥವರು. ನಿಜವಾದ ಜ್ಞಾನಿಗಳು ಏಕಾಂತದಲ್ಲಿ ನಿಶ್ಶಬ್ದವಾಗಿರುವ ಕಡೆ ವಾಸಿಸುತ್ತಾರೆ. ಅಂತವರು ಕೆಲವರು, ಅಂತವರ ಪುಸ್ತಕ, ಅವೂ ನಮ್ಮಲ್ಲಿ ಉಂಟು. ಅವುಗಳನ್ನು ನೀನು ಗಮನಿಸಬೇಕು."

ಹೀಗೆ ಆ ಪಂಡಿತ ಮಾತನಾಡುತ್ತಿರುವಾಗಲೇ ಇನ್ನೊಬ್ಬ ಪಂಡಿತ ಅಲ್ಲಿಗೆ ಬಂದ. ಅವರ ಸಂಭಾಷಣೆ ಎಷ್ಟು ಹಿತವಾಗಿತ್ತು, ಎಷ್ಟು ತಿಳಿವಳಿಕೆಯಿಂದ ತುಳುಕುತ್ತಿತ್ತು, ಎಷ್ಟು ನಿಸ್ಪೃಕ್ಷವಾಗಿತ್ತು ಎಂದರೆ – ತಾನು ಇದುವರೆಗೆ ಇಂತಹ ಮಾತುಕತೆಯನ್ನು ಕೇಳಿರಲಿಲ್ಲವೆಂದು ಬಬೂಕ ಒಪ್ಪಿಕೊಂಡ.

"ಈ ಇವರನ್ನು ಏನಾದರೂ ಇಥೂರಿಯಲ್ ದೇವತೆ ಮುಟ್ಟಿದರೆ, ಅವನಿಗೆ ಲವಲೇಶವಾದರೂ ಕರುಣೆ ಇಲ್ಲ ಎಂದು ಹೇಳಬೇಕು" ಎಂದು ಕೊಂಡ.

ಈ ಪಂಡಿತರನ್ನು ಕುರಿತು ಅವನಿಗೆ ಮನಃಸಮಾಧಾನವಾದರೂ, ಉಳಿದ ಜನಸಮುದಾಯದಮೇಲೆ ಅವನಿಗಿನ್ನೂ ಅಸಮಾಧಾನವೇ ಇತ್ತು.

ಅವನ ಜೊತೆಗೆ ಮಾತನಾಡುತ್ತಿದ್ದ ವಿವೇಕಿಯೊಬ್ಬ ಹೇಳಿದ : "ನೀನು ಇಲ್ಲಿಗೆ ಹೊಸಬ. ಇಲ್ಲಿಯ ಅನ್ಯಾಯಗಳು ಹಿಂಡುಹಿಂಡಾಗಿ ನಿನ್ನ ಕಣ್ಣಿಗೆ ಕಾಣಿಸಿಕೊಳ್ಳುವುವೇ ಹೊರತು, ಇದೇ ಅನ್ಯಾಯಗಳ ಮರೆಗಿರುವ ಒಳ್ಳೆಯದೆಲ್ಲ ಮುಚ್ಚಿಹೋಗಿರುತ್ತದೆ. ಅನೇಕ ಸಲ ಇದೇ ಅನ್ಯಾಯಗಳಿಂದಲೇ ಕೆಲವು ಒಳ್ಳೆಯದೂ ಆಗುವುದುಂಟು. ಇದನ್ನು ನೀನು ಗಮನಿಸಿದಂತೆ ಕಾಣುವುದಿಲ್ಲ."

ಆಗ ಅವನಿಗೆ ತಿಳಿದುಬಂತು : ಇದೇ ಪಂಡಿತರಲ್ಲಿಯೂ ಅಸೂಯೆ ಇಲ್ಲದವರಿದ್ದಾರೆ, ಇದೇ ವಿರಕ್ತರ ಮಧ್ಯೆಯೂ ಶೀಲವಂತರಿದ್ದಾರೆ— ಎಂದು. ಒಂದು ವಿರಕ್ತರ ಮಠ ಇನ್ನೊಂದು ಮಠವನ್ನು ಮುಳುಗಿಸಲು

ಹವಣಿಸುತ್ತದೆಯೋ ಎಂಬಂತೆ ಕಂಡುಬಂದರೂ ಒಂದು ಇನ್ನೊಂದು ಮಿತಿಮೀರಿದಂತೆ ತಹಬಂದಿಯಲ್ಲಿ ಹಿಡಿದಿರುತ್ತದೆಂಬುದನ್ನೂ ಕಂಡು ಕೊಂಡ. ಆವರವರಿಗೆ ಅಭಿಪ್ರಾಯಭೇದ ಏನೇ ಇರಬಹುದಾದರೂ, ಒಂದೇ ನಿಯಮಗಳನ್ನು ನಂಬಿ, ಅದನ್ನು ಜನಗಳಿಗೆ ಬೋಧಿಸುತ್ತಿದ್ದರು; ಮನೆಗೆ ಪಾಠಹೇಳಲು ಬರುವ ಗುರು ತನ್ನ ಶಿಷ್ಯನ ಮೇಲೆ ಕಣ್ಣಿಟ್ಟಿದ್ದರೆ, ಮನೆಯ ಯಜಮಾನ ಅವರಿಬ್ಬರ ಮೇಲೂ ಕಣ್ಣಿಟ್ಟ ಹಾಗೆ. ಇನ್ನೂ ಆ ವಿರಕ್ತರ ಪರಿಚಯ ಹೆಚ್ಚು ಹೆಚ್ಚು ಆದಹಾಗೆಲ್ಲಾ, ಅವರಲ್ಲೂ ದಿವ್ಯ ವಾದ ಸ್ವಭಾವದವರು ಇರುವರೆಂದು ಕಂಡ. ಟಿಬೆಟ್ಟಿನ ಮಹಾಲಾ ಮನ ಮೇಲೆ ಯುದ್ಧ ಮಾಡಬೇಕು ಎಂದ ಮೂರ್ಖರ ಮಧ್ಯೆಯೂ ಮಹಾ ಮೇಧಾವಿಗಳು ಇದ್ದರೆಂಬುದನ್ನು ತಿಳಿದ. ಕಡೆಗೆ, "ಈ ಜನರ ಸ್ವಭಾವ ಕೂಡ ಇವರ ಕಟ್ಟಡಗಳ ಹಾಗೆಯೇ : ಕೆಲವು ಅಧ್ವಾನವಾಗಿವೆ, ಕೆಲವಂತೂ ಅಮೋಘವಾಗಿವೆ" ಎಂದುಕೊಂಡ.

## ಅಧ್ಯಾಯ ಹತ್ತು

ಬಬೂಕ ತನ್ನ ಸ್ನೇಹಿತನಿಗೆ ಹೇಳಿದ :

"ಈಗ ನನಗೆ ಸ್ಪಷ್ಟವಾಯಿತು : ಈ ವಿರಕ್ತರಿಂದ ದೇಶಕ್ಕೆ ಅಪಾಯ ಎಂದುಕೊಂಡಿದ್ದೆ. ಆದರೆ ಇವರಿಂದಲೂ ಪ್ರಯೋಜನವಾಗುತ್ತಿದೆ. ಆದರೆ, ನೆನ್ನೆ ಮೊನ್ನೆ ತಾನೆ ನ್ಯಾಯಾಂಗದ ಪರೀಕ್ಷೆಗಳನ್ನು ಮುಗಿಸಿ ಬಂದವರಿಗೆ ನ್ಯಾಯಾಧಿಕಾರಗಳನ್ನು ಮಾರಾಟಮಾಡುವುದು—ಇದು ಪರಮ ಅನ್ಯಾಯ ಎಂದು ನೀನು ಕೂಡ ಒಪ್ಪಲೇಬೇಕು. ಇದರ ಬದಲು ನ್ಯಾಯಾಂಗದ ಜಟಿಲವಾದ ವ್ಯವಹಾರಗಳನ್ನು ಬಿಡಿಸಿ ಬಿಡಿಸಿ ಮುಪ್ಪಾದವರಿಗೇ ಈ ಅಧಿಕಾರಸ್ಥಾನಗಳನ್ನು ಮೀಸಲು ಮಾಡಿಡುವುದು ಮೇಲು."

ಆ ಪಂಡಿತ ಸ್ನೇಹಿತ ಹೇಳಿದ :

"ನೀನು ಪರ್ಷಿಯಾಕ್ಕೆ ಬರುವ ಮೊದಲು ನಮ್ಮ ಸೈನ್ಯವನ್ನು ಕಂಡೆಯಲ್ಲವೆ ? ಅಲ್ಲಿನ ಸೈನ್ಯಾಧಿಕಾರಿಗಳು, ತಮ್ಮ ಅಧಿಕಾರವನ್ನು ಕೊಂಡುಕೊಂಡಿದ್ದರೂ, ಹೇಗೆ ಕಾದಾಡಿದರೆಂಬುದನ್ನು ಕಂಡೆ. ನಮ್ಮ

ನ್ಯಾಯಾಧಿಕಾರಿಗಳೂ ಅಷ್ಟೆ. ಹಣ ಕೊಟ್ಟು ಅಧಿಕಾರವನ್ನು ಕೊಂಡಿದ್ದರೂ, ಅವರ ತೀರ್ಪುಗಳೆಲ್ಲಾ ತಪ್ಪಾಗಿರುವುದಿಲ್ಲ."

ಮಾರನೆಯ ದಿನ ಅವನು ಬಬೂಕನನ್ನು ಮುಖ್ಯ ನ್ಯಾಯಾಸ್ಥಾನಕ್ಕೆ ಕರೆದುಕೊಂಡುಹೋದ. ಅಲ್ಲೊಂದು ವಿಚಾರಣೆ ನಡೆಯುತ್ತಿತ್ತು. ಆ ವಿಚಾರಣೆಯ ಬಗ್ಗೆ ದೇಶದಲ್ಲೆಲ್ಲಾ ಕುತೂಹಲ ಹಬ್ಬಿತ್ತು. ಹಳೆಯ ನ್ಯಾಯವಾದಿಗಳೆಲ್ಲ ತಮ್ಮ ಅಭಿಪ್ರಾಯಗಳನ್ನು ಹೇಳಿದ್ದೇ ಹೇಳಿದ್ದು ; ದೊಡ್ಡ ದೊಡ್ಡ ಪುಸ್ತಕಗಳಿಂದ ಕಾನೂನು ಕಾಯಿದೆಗಳನ್ನು–ಸಂಬದ್ಧವೋ, ಅಸಂಬದ್ಧವೋ—ಉದಾಹರಿಸಿದ್ದೇ ಉದಾಹರಿಸಿದ್ದು. ಅವರ ತೀರ್ಪು ಕೂಡ ಸರ್ವಸಮರ್ಪಕವಾಗಿರುತ್ತಿತ್ತು. ಏಕೆಂದರೆ, ನ್ಯಾಯವಾದಿಗಳು ಪುಸ್ತಕಗಳನ್ನು ನೋಡಿ ಅಭಿಪ್ರಾಯ ವ್ಯಕ್ತಮಾಡುತ್ತಿದ್ದರೆ, ನ್ಯಾಯಪತಿಗಳು ತಾವು ಸ್ವತಂತ್ರವಾಗಿ ವಿಚಾರಮಾಡಿ ತೀರ್ಪು ಕೊಡುತ್ತಿದ್ದರು.

"ಅಕ್ರಮಗಳಿಂದಲೂ ಒಂದೊಂದು ವೇಳೆ ಒಳ್ಳೆಯದಾಗುವುದುಂಟು" ಎಂದುಕೊಂಡ, ಬಬೂಕ. ಅದೇ ದಿನ, ತಾನು ಯಾವ ಜಮೀನುದಾರರ ಸಂಪತ್ತನ್ನು ಕಂಡು ಅಧಿಕವಾಗಿ ಅಸಮಾಧಾನ ಪಡೆದಿದ್ದನೋ, ಅದೇ ಅವರ ಸಂಪತ್ತಿನಿಂದ ಎಂಥ ಉತ್ಕೃಷ್ಟವಾದ ಪರಿಣಾಮವಾಗುವುದೆಂದೂ ಕಂಡ. ಚಕ್ರವರ್ತಿಗೆ ದೇಶಕಾರ್ಯಕ್ಕೆ ದ್ರವ್ಯಬೇಕಾಯಿತಂತೆ; ಬೇರೆ ಉಪಾಯದಿಂದ ಆರು ತಿಂಗಳು ಹೆಣಗಿದ್ದರೂ ಒದಗದಿದ್ದಷ್ಟು ಧನವನ್ನು ಒಂದು ಗಂಟೆಯೊಳಗಾಗಿ ಸಂಪಾದಿಸಿಬಿಟ್ಟುದನ್ನು ಬಬೂಕ ಕಂಡ ನೆಲದ ಮಂಜನ್ನು ಹೀರಿ ಹೀರಿ ಕೊಬ್ಬಿದ್ದ ಆ ಮಹಾಮೇಘಗಳು ತಾವು ಪಡೆದದ್ದನ್ನು ಮಳೆಯಾಗಿ ಮತ್ತೆ ಕೊಟ್ಟುದನ್ನು ಕಂಡ. ಇದೂ ಅಲ್ಲದೆ, ಅದೇ ಧನಾಢ್ಯರ ಮಕ್ಕಳು ಅನೇಕರು ಉಳಿದವರ ಮಕ್ಕಳಿಗಿಂತ ಹೆಚ್ಚು ವಿದ್ಯೆ ಕಲಿಯಲು ಅವಕಾಶವಿರುವುದೆಂಬುದನ್ನೂ ಕಂಡ. ವಿದ್ಯೆ ಬುದ್ಧಿಗಳನ್ನು ವಿಶೇಷವಾಗಿ ಕಲಿತವರು ಹಣ ಕೊಟ್ಟು ಅಧಿಕಾರಗಳನ್ನು ಕೊಂಡುಕೊಂಡರು ಕೂಡ, ಅದರಿಂದ ಏನೂ ಅಂಥ ಅಪಾಯ ಸಂಭವಿಸುವುದಿಲ್ಲ—ಎಂದುಕೊಂಡ, ಬಬೂಕ.

## ಅಧ್ಯಾಯ ಹನ್ನೊಂದು

ಕ್ರಮಕ್ರಮವಾಗಿ ಬಬೂಕ ಆ ಜಮೀನುದಾರರ ದುರಾಸೆಯನ್ನು ಕ್ಷಮಿಸಿದ: "ಉಳಿದವರಿಗಿಂತ ಏನೂ ಹೆಚ್ಚು ದುರಾಸೆಯಿಲ್ಲ; ಇವರು ಕೂಡ ದೇಶದ ಯೋಗಕ್ಷೇಮಕ್ಕೆ ಅಗತ್ಯ." ಮೌಢ್ಯವನ್ನೂ ಕ್ಷಮಿಸಿದ: 'ಈ ಮೂರ್ಖತನದಿಂದಲೇ ಮಹಾಮೇಧಾವಿಗಳೂ ಮುಂದೆ ಬರುತ್ತಾರೆ.' ಎಂದುಕೊಂಡ. ಪಂಡಿತರ ಅಸೂಯೆಯನ್ನು ಕ್ಷಮಿಸಿದ: 'ಇವರಲ್ಲಿಯೂ ಮಹಾ ಜ್ಞಾನಿಗಳಿದ್ದಾರೆ' ಎಂದುಕೊಂಡ. ವಿರಕ್ತರ ಕುತಂತ್ರಗಳನ್ನೂ ಕ್ಷಮಿಸಿದ: 'ಇವರಲ್ಲಿ ದೋಷಗಳನ್ನು ಮರೆಸಿಬಿಡುವ ಗುಣಗಳಿವೆ' ಎಂದುಕೊಂಡ. ಆದರೆ ಒಂದನ್ನು ಮಾತ್ರ ಅವನಿಗೆ ಕ್ಷಮಿಸಲಾಗಲಿಲ್ಲ. ಅದು ಯಾವುದೆಂದರೆ—ಅಲ್ಲಿನ ಸ್ತ್ರೀಯರ ಪ್ರಣಯ ಪ್ರಸಂಗಗಳು. 'ಇದರಿಂದ ಈ ದೇಶಕ್ಕೆ ಕೇಡು ಖಂಡಿತ' ಎಂದುಕೊಂಡ.

ಮನುಷ್ಯಜೀವನದ ಅತಿ ಆಂತರಿಕವಾದ ರಹಸ್ಯಗಳನ್ನು ಕಾಣಬೇಕೆಂದುಕೊಂಡು, ಬಬೂಕ, ಸಂಸ್ಥಾನದ ಒಬ್ಬ ಮಂತ್ರಿಯನ್ನು ಕಂಡುಬರಲು ವೇಳೆಯನ್ನು ಗೊತ್ತುಪಡಿಸಿಕೊಂಡ. ಅವನಿಗೆ ದಾರಿಯುದ್ದಕ್ಕೂ "ಎಲ್ಲಿ ಯಾವ ಹೆಂಡತಿಯನ್ನು ಯಾವ ಗಂಡ ನನ್ನ ಕಣ್ಣ ಮುಂದೆಯೇ ಕೊಂದುಬಿಡುವನೋ" ಎಂದು ಗಾಬರಿ. ಮಂತ್ರಿಯ ಮನೆಗೆ ಬಂದರೆ—ಹೊಸಿಲು ದಾಟುವ ಮುಂಚೆ, ಜಗಲಿಯ ಮೇಲೆ ಎರಡು ಗಂಟೆ ಕಾಯಬೇಕಾಯಿತು; ಹೊಸಿಲು ದಾಟಿದ ಮೇಲೆ ಮತ್ತೆ ಎರಡು ಗಂಟೆ. ಕಾಯುತ್ತ ನಿಂತಿದ್ದ ಆ ವೇಳೆಯಲ್ಲಿ ಮನಸ್ಸು ಗಟ್ಟಿ ಮಾಡಿಕೊಂಡ: 'ಈ ಮಂತ್ರಿಯನ್ನೂ ಇವನ ಸೇವಕರನ್ನೂ ಮೊದಲು ಇಥೂರಿಯಲನ ಕ್ರೂರ ಕಟಾಕ್ಷಕ್ಕೆ ಒಪ್ಪಿಸಬೇಕು.' ಮನೆಯ ಅಂಗಳದಲ್ಲಿ ನೋಡಿದರೋ—ಅನೇಕ ಅಂತಸ್ತಿನ ಮಹಿಳೆಯರು, ಅನೇಕ ಅಭಿಪ್ರಾಯಗಳ ವಿರಕ್ತರು, ನ್ಯಾಯಪತಿಗಳು, ವ್ಯಾಪಾರಿಗಳು, ಅಧಿಕಾರಿಗಳು, ಪಂಡಿತರು. ಎಲ್ಲರೂ ಮಂತ್ರಿಯನ್ನು ದೂರುವವರೇ. "ಈ ಮಂತ್ರಿ ನಮ್ಮನ್ನು ಸುಲಿಗೆ ಮಾಡುತ್ತಾನೆ" ಎಂದು, ಜಿಪುಣರು; 'ಇವನಿಗೆ ಕ್ಷಣ ಚಿತ್ತ, ಕ್ಷಣ ಪಿತ್ತ' ಎಂದು, ಕೆಲವರು ಚಪಲರು; 'ಇವನಿಗೆ ತನ್ನ ಭೋಗ

ವೊಂದು ಹೊರತು ಬೇರೇನೂ ಬೇಕಿಲ್ಲ' ಎಂದು, ಇತರರು ಭೋಗಿಗಳು; 'ಇವನು ಹೀಗೇ ಎಲ್ಲರನ್ನೂ ಎದುರುಹಾಕಿಕೊಳ್ಳಲಿ, ಹಾಳಾಗಿ ಹೋಗುತ್ತಾನೆ' ಎಂದು, ಜಗಳಗಂಟಿಗರು. 'ಈ ಮುದಿಯನಿಗೆ ಬದಲಾಗಿ ಯಾವನಾದರೂ ಯುವಕ ಮಂತ್ರಿಯಾಗಬಾರದೆ'ಎಂದು, ಯುವತಿಯರು.

ಬಬೂಕ ಅವರ ಮಾತುಗಳನ್ನು ಕೇಳುತ್ತಾ, ಎಂದುಕೊಂಡ :

"ಇವನೀಗ ಭಾಗ್ಯವಂತ. ತನಗೆ ಅಗದಿದ್ದವರನ್ನೆಲ್ಲಾ ಈ ಅಂಗಳದಲ್ಲಿ ಅಡಗಿಸಿಕೊಂಡಿದ್ದಾನೆ. ತನ್ನನ್ನು ಕಂಡು ಅಸೂಯೆ ಪಡುವವರನ್ನು ತನ್ನ ಕಾಲ ಕೆಳಗೆ ಹಿಡಿದುಕೊಂಡಿದ್ದಾನೆ. ತನ್ನನ್ನು ನಿಂದಿಸುವವರೆಲ್ಲ ನೆಲದಲ್ಲಿ ಹೊರಳುವುದನ್ನು ಕಣ್ಣಾರೆ ಕಾಣುತ್ತಿದ್ದಾನೆ."

ಕಡೆಗೆ ಮಂತ್ರಿಯ ಸಮ್ಮುಖಕ್ಕೆ ಬಬೂಕ ಬಂದ. ಮಂತ್ರಿ ವಯಸ್ಸಾಗಿ, ಅಧಿಕಾರದ ಭಾರದಿಂದ ಕುಗ್ಗಿಹೋಗಿದ್ದರೂ, ತುಂಬ ಚಟುವಟಿಕೆಯಿಂದ ಕೆಲಸಮಾಡುತ್ತಿದ್ದ.

ಬಬೂಕನನ್ನು ಸಂತೋಷದಿಂದ ಬರಮಾಡಿಕೊಂಡ. ಅವರ ಸಂಭಾಷಣೆ ಹಿತಕರವಾಗಿತ್ತು. ಮಂತ್ರಿ, ತನಗೆ ಸುಖವಿಲ್ಲವೆಂದು ಒಪ್ಪಿಕೊಂಡ; ತನ್ನನ್ನು ಹಣವಂತನೆಂದು ತಿಳಿದುಕೊಂಡಿದ್ದರೂ ತಾನು ಬಡವ, ಎಂದ; ತಾನು ಸರ್ವಸಮರ್ಥನೆಂದು ಹೆಸರಾಗಿದ್ದರೂ, ತನಗೂ ಅಡ್ಡಿ ಆತಂಕಗಳು ಏನೂ ಕಡಮೆಯಿಲ್ಲ, ಎಂದ; ದೇಶ ಉತ್ತಮವಾದ ಅಧಿಕಾರಗಳನ್ನೆಲ್ಲ ಅಯೋಗ್ಯರಿಗೇ ಕೊಡುತ್ತಿದೆ, ಎಂದ; ತಾನೂ ನಲವತ್ತು ವರ್ಷದ ಸೇವೆ ಸಲ್ಲಿಸುತ್ತಿದ್ದೇನೆ ಆದರೂ ಒಂದು ಕ್ಷಣ ತನಗೆ ವಿರಾಮ ದೊರಕಿಲ್ಲ, ಎಂದ.

ಬಬೂಕನಿಗೆ 'ಅಯ್ಯೋ ಪಾಪ' ಎನ್ನಿಸಿತು. "ಈ ಮನುಷ್ಯ ತಪ್ಪುಮಾಡಿರಬಹುದಾದರೂ, ಇಥೂರಿಯಲ್ ಇವನನ್ನು ಶಿಕ್ಷಿಸಬಹುದೇ ಹೊರತು, ಇವನನ್ನು ನಾಶಮಾಡುವುದು ಸರ್ವಥಾ ತಪ್ಪು. ಶಿಕ್ಷೆ ಮಾಡುವುದಾದರೂ, ಇವನನ್ನು ಈಗಿರುವ ಅಧಿಕಾರದಲ್ಲಿಯೇ ಇಟ್ಟದ್ದರೆ ಸಾಕು" ಎಂದುಕೊಂಡ.

## ಅಧ್ಯಾಯ ಹನ್ನೆರಡು

ಹೀಗೆ ಬಬ್ರೂಕನೂ ಆ ಮಂತ್ರಿಯೂ ಮಾತನಾಡುತ್ತಿರಬೇಕಾದರೆ, ಮಧ್ಯಾಹ್ನ ಬಬ್ರೂಕ ಊಟಮಾಡಿದನಲ್ಲಾ ಆ ಮನೆಯಾಕೆ ಒಳಗೆ ನುಗ್ಗಿ ಬಂದಳು. ಅವಳ ಮುಖದಲ್ಲಿ ಏನೋ ಅಸಮಾಧಾನ, ಏನೋ ಕ್ರೋಧ. ಮಂತ್ರಿಯ ಮೇಲೆ ಆಕ್ಷೇಪದ ಮಳೆ ಕರೆದಳು; ಕಣ್ಣೀರು ಸುರಿಸಿದಳು; ಉತ್ತಮಕುಲದಲ್ಲಿ ಹುಟ್ಟಿದ ತನ್ನ ಗಂಡನಿಗೆ ದೊರಕಬೇಕಾಗಿದ್ದ ಅಧಿಕಾರ ಅವನಿಗೆ ದೊರಕಲಿಲ್ಲವೆಂದು ಕೂಗಾಡಿದಳು. ಅದೆಷ್ಟು ವಾದಮಾಡಿದಳು, ಎಷ್ಟು ಒತ್ತಾಯಪಡಿಸಿದಳು, ಮಂತ್ರಿ ಎತ್ತಿದ ಆಕ್ಷೇಪಗಳಿಗೆ ಹೇಗೆ ಉತ್ತರಕೊಟ್ಟಳು--ಮಂತ್ರಿಗೆ ನಮಸ್ಕಾರ ಹೇಳಿ ಹೋಗುವುದರೊಳಗಾಗಿ ತನ್ನ ಗಂಡನ ಭಾಗ್ಯವನ್ನು ಸಂಪಾದಿಸಿಕೊಂಡೇ ಹೋದಳು.

ಬಬ್ರೂಕ ಅವಳನ್ನು ಮೆಚ್ಚಿಕೊಂಡು ಹೇಳಿದ:

"ಅಮ್ಮಾ! ಯಾರಲ್ಲಿ ನಿನಗೆ ಪ್ರೀತಿಯಿಲ್ಲವೋ, ಯಾರನ್ನು ಕಂಡು ನೀನು ನಿಜವಾಗಿಯೂ ಹೆದರಬೇಕೋ ಅವನಿಗೆ ಅಧಿಕಾರವನ್ನು ಸಂಪಾದಿಸಿಕೊಡುವುದಕ್ಕಾಗಿ ನೀನು ಇಷ್ಟು ಶ್ರಮವಹಿಸಿದ್ದು ಶ್ಲಾಘನೀಯ."

"ಏನೆಂದೆ? ಅವನಲ್ಲಿ ನನಗೆ ಪ್ರೀತಿಯಿಲ್ಲವೆ? ಹೇಳುತ್ತೇನೆ ಕೇಳು: ನನಗೆ ಅವನಷ್ಟು ಪ್ರಿಯಸ್ನೇಹಿತ ಪ್ರಪಂಚದಲ್ಲೇ ಇಲ್ಲ. ಅವನಿಗಾಗಿ ನಾನು ಯಾವ ತ್ಯಾಗಕ್ಕೂ ಸಿದ್ಧ— ಒಂದು ಹೊರತು, ನನ್ನ ಪ್ರಣಯಿಯೊಬ್ಬನನ್ನು ಬಿಟ್ಟು. ನನ್ನ ಗಂಡನಾದರೂ ಅಷ್ಟೆ. ನನಗಾಗಿ ಯಾವ ಕಾರ್ಯಕ್ಕೂ ಸಿದ್ಧ— ಒಂದು ಹೊರತು. ಅವನ ಪ್ರಣಯಿನಿಯೊಬ್ಬಳನ್ನು ಬಿಟ್ಟು. ಅವಳ ಪರಿಚಯಮಾಡಿಕೊಳ್ಳಬೇಕೆಂದು ನನಗೂ ಆಸೆ; ಅವಳು ಚೆಲುವೆಯಂತೆ, ಬಲು ಒಳ್ಳೆಯ ರೂಪವಂತೆ. ಈ ಸಂಜೆ ನಾನು ನನ್ನ ಪ್ರಿಯನೊಡನೆ ಊಟಮಾಡುವಾಗ ಅವಳನ್ನೂ ಕರೆದು ತರುವಂತೆ ನನ್ನ ಗಂಡನಿಗೆ ಹೇಳುತ್ತೇನೆ." ಎಂದಳು, ಅವಳು.

ಅವಳು ಬಬ್ರೂಕನನ್ನೂ ಸಂಗಡಲೆ ಕರೆದುಕೊಂಡುಹೋದಳು. ಗಂಡ ಮನೆಗೆ ಬರುವಾಗ ಏನೋ ದುಮ್ಮಾನದಿಂದ ಬಂದ. ಹೆಂಡತಿ

ಯನ್ನು ಕಂಡೊಡನೆಯೇ ಅವನ ಮುಖ ಮುಮ್ರಾನದಿಂದ ಅರಳಿತು. ಅವನ ಕೃತಜ್ಞತೆಯಂತೂ ಹೇಳಿ ಮುಗಿಯದು. ತನ್ನ ಹೆಂಡತಿಯನ್ನು ತಬ್ಬಿಕೊಂಡ, ತನ್ನ ಪ್ರಣಯಿನಿಯನ್ನು ತಬ್ಬಿಕೊಂಡ, ತನ್ನ ಹೆಂಡತಿಯ ಪ್ರಣಯಿಯನ್ನು ತಬ್ಬಿಕೊಂಡ, ಕಡೆಗೆ ಬಬೂಕನನ್ನೂ ತಬ್ಬಿಕೊಂಡ. ಆ ದಿನ ಆ ಊಟದ ಮೇಜಿನ ಸುತ್ತ ಏನು ಐಕ್ಯತೆ, ಏನು ಹಿಗ್ಗು, ಏನು ಸುಖ, ಏನು ಸಂತೋಷ!

ಮನೆಯಾಕೆ ಊಟಮಾಡುವಾಗ ಹೇಳಿದಳು : "ನೋಡು : ನಡತೆ ಕೆಟ್ಟ ಹೆಂಗಸರೆಂದು ಯಾರನ್ನು ಕರೆಯುತ್ತಾರೋ ಅವರಲ್ಲಿ ಕೂಡ ಸತ್ಪುರುಷರಲ್ಲಿರುವಂತೆಯೇ ಸದ್ಗುಣಗಳು ಇವೆ. ಬೇಕಾದರೆ, ಬಾ; ನಾಳೆ ನನ್ನ ಗೆಳತಿ ಥಿಯೋನಾ ಮನೆಗೆ ಕರೆದುಕೊಂಡು ಹೋಗುತ್ತೇನೆ. ಕೆಲವರು ಅವಳನ್ನು ಬಾಯಿಗೆ ಬಂದಂತೆ ಅಂದುಹೋಗಬಹುದು. ಆದರೆ, ಅವಳಾದರೋ, ತನ್ನ ಸ್ವಾರ್ಥಕ್ಕಾಗಿಯಾದರೂ ಒಂದು ಅನ್ಯಾಯ ಮಾಡತಕ್ಕವಳಲ್ಲ. ಅವಳಿಗೂ ಒಬ್ಬ ಪ್ರಣಯಿ ಇದ್ದಾನೆ. ಅವನ ಅಭಿವೃದ್ಧಿ ಹೇಗೆ ಎಂಬುದೇ ಅವಳಿಗೆ ದೊಡ್ಡ ಆಸಕ್ತಿ. ಯಾವುದಾದರೂ ಮಾಡಬೇಕಾದ ಒಳ್ಳೆಯದನ್ನು ಮಾಡಲು ತಪ್ಪಿದಂದು, ಅವಳಿಗೆ ಮುಖತೋರಲು ಅವನು ನಾಚುತ್ತಾನೆ. ಒಂದು ಹೆಣ್ಣಿನ ಅಭಿಮಾನವನ್ನು ಪಡೆಯುವುದಕ್ಕಾಗಿ ಒಂದು ಒಳ್ಳೆಯ ಕೆಲಸವನ್ನು ಕೈ ಹಿಡಿದು ಮಾಡುವ ಗಂಡಸಿಗೆ, ಬೇರೆ ಸ್ಫೂರ್ತಿ ಬೇರೆ ಉತ್ತೇಜನದಿಂದ ಆಗಬೇಕಾದ್ದೇನು?"

ಬಬೂಕ ಮಾರನೆಯ ದಿನ ಥಿಯೋನಾ ಮನೆಗೆ ಹೋದ. ಸಮಸ್ತವಾದ ಸುಖ ಸಾಮಗ್ರಿಗಳಿಂದ ತುಂಬಿದ ಮನೆ. ಮನೆಯೊಡತಿಯಾದ ಥಿಯೋನಾ ಬಂದವರು ಬಚ್ಚೊಬ್ಬರ ಹತ್ತಿರಲೂ ಅವರವರಿಗೆ ಅರ್ಥವಾಗುವಂತೆ ಮಾತನಾಡುವಳು. ಬಂದವರಿಗೆ ತಮ್ಮ ಮನೆಯಲ್ಲಿ ಇರುವವೆಂದೇ ಎನ್ನಿಸುವುದು. ಥಿಯೋನಾ ಸುಂದರಿ, ಸರಸಿ, ಸರಳ ಹೃದಯೆ, ಉದಾರಿ, ಸಂತೋಷಿ.

ಬಬೂಕ ನೋಡಿದ : "ಇನ್ನು ಏನಾದರೂ ಈ ನಗರದಲ್ಲಿ ನಿಂತರೆ, ಈ ಥಿಯೋನಾ ಸಹವಾಸದಲ್ಲಿ ಇಥೂರಿಯಲ್ ದೇವತೆಯನ್ನೂ ಮರೆತು

ಹೊದೇನು!" ಎಂದು. ಏನೇ ಅಸೂಯೆ, ಚಾಡಿಕ್ಷುದ್ರಗಳಿದ್ದರೂ, ದುರಾಸೆ ದುರ್ನಡತೆ ಇದ್ದರೂ ಜೊತೆಜೊತೆಯಲ್ಲೇ ನಯ ನಾಜೋಕು, ದಯೆ ದಾಕ್ಷಿಣ್ಯ, ಸುಖ ಸಂತೋಷಗಳೂ ಇದ್ದ ಆ ನಗರದಮೇಲೆ ಅವನಿಗೆ ಪ್ರೀತಿಯುಂಟಾಗಿತ್ತು. ತಾನು ಒಪ್ಪಿಸುವ ವರದಿಯನ್ನು ಓದಿ, ಎಲ್ಲಿ ಇಥೂರಿಯಲ್ ದೇವತೆ ಕೋಪಗೊಂಡು ಪರ್ಷಿಯಾವನ್ನು ನಾಶಮಾಡಿ ಬಿಡುವನೋ ಎಂದೂ ಹೆದರಿಕೆಯಾಯಿತು.

ತಾನು ತನ್ನ ವರದಿಯೊಪ್ಪಿಸುವುದಕ್ಕೆ ಈ ವಿಧಾನವನ್ನು ಆಶ್ರಯಿಸಿದ. ಆ ಊರಿನಲ್ಲಿ ಅತ್ಯುತ್ತಮವಾಗಿ ಎರಕ ಹುಯ್ಯುವವನನ್ನು ಹಿಡಿದು, ಎಲ್ಲಾ ತರಹದ ಲೋಹಗಳು, ಕಲ್ಲು. ಮಣ್ಣು, ಜೊತೆಗೆ ಅಮೂಲ್ಯವಾದ ಮತ್ತು ಅಲ್ಪಮೂಲ್ಯವಾದ ರತ್ನಗಳು—ಇವೆಲ್ಲವನ್ನೂ ಬೆರಸಿ, ಎರಕ ಹುಯ್ದು, ಒಂದು ಸಣ್ಣ ಪ್ರತಿಮೆಯನ್ನು ಮಾಡಿಕೊಡು" ಎಂದು ಕೇಳಿ ಮಾಡಿಸಿಕೊಂಡ. ಅದನ್ನು ಎತ್ತಿಕೊಂಡು ಇಥೂರಿಯಲನ ಹತ್ತಿರ ಬಂದು ಕೇಳಿದ :

"ಇದರಲ್ಲಿ ಚಿನ್ನವೂ ವಜ್ರವೂ ಮಾತ್ರವೇ ಇಲ್ಲವೆಂದು, ಈ ವಿಗ್ರಹವನ್ನು ಒಡೆದುಬಿಡುವೆಯೇನು?"

ಬಬೂಕನ ಮುಖದಿಂದ ಮಾತು ಬರುವುದರೊಳಗಾಗಿಯೇ ಇಥೂರಿಯಲ್ ಅವನ ಅರ್ಥವನ್ನು ಗ್ರಹಿಸಿದ. "ಪರ್ಷಿಯಾವನ್ನು ಶಿಕ್ಷಿಸುವುದು ಬೇಡ. ಜಗತ್ತು ಹೇಗೆ ಹೋಗುವುದೋ ಹಾಗೆ ಹೋಗಲಿ" ಎಂದು ನಿಶ್ಚಯಮಾಡಿಕೊಂಡ. ಏಕೆಂದರೆ, ಪ್ರತಿಯೊಂದೂ ಹೇಗಿರಬೇಕೋ ಹಾಗೆ ಇಲ್ಲದೆ ಹೋದರೂ, ಇರುವುದಾದರೂ ಅಷ್ಟು ತೀರ ಕೆಟ್ಟಿಲ್ಲ." ಎಂದುಕೊಂಡ.

ಹೀಗೆ, ಪರ್ಷಿಯಾಕ್ಕೆ ಏನೂ ಹಾನಿ ತಟ್ಟದೆ ಅದು ಉಳಿಯಿತು. ಬಬೂಕನಾದರೂ ಅದಕ್ಕೆ ಏನೂ ಆಕ್ಷೇಪ ಮಾಡಲಿಲ್ಲ.

ಬಿ. ಎಸ್. ಐಯ್ಯಂಗಾರ್, ಪ್ರಿಂಟರ್ಸ್, ಬೆಂಗಳೂರು.



ಶ್ರೀ ಜಿ. ಪಿ. ರಾಜರತ್ನಂ.

ಹುಟ್ಟಿದ್ದು : ಮೈಸೂರಿನ ಪ್ರಸಿದ್ಧ ಗುಂಡ್ಲುಪಂಡಿತ ವಂಶ. ಶ್ರೀ ರಾಮಾನುಜ ಸಿದ್ಧಾಂತದ ತಾಯಿಯ ಹಾಲು ಕುಡಿದು ಬೆಳೆದವನ್ನು. ತಂದೆ—ಮಧ್ಯಮ ಶಾಲೆಯ ಉಪಾಧ್ಯಾಯರು, ಸಾಹಿತ್ಯದ ಮೊದಲ ಸವಿ ಕಾಣಿಸಿದವರು. ವಿದ್ಯೆ: ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ- ಬಿ ಎ., ಮೈಸೂರು ಮಹಾರಾಜಾ ಕಾಲೇಜಿನಲ್ಲಿ- ಎಮ್. ಎ., ನೀತಿ, ನಡತೆ: ನಾಡಿನ ಹಿರಿಯರ ಹರಕೆಯಿಂದ ಹೊಂದಿದ್ದು.

ಜೀವ—ಕನ್ನಡಕ್ಕೆ ಮುದುಪೆಯಾದದ್ದು; ಜೀವನ—ಕನ್ನಡದ ಕರುಣೆಯಿಂದ, ಕನ್ನಡದಲ್ಲಿ, ಕನ್ನಡಕ್ಕಾಗಿ.

ವೃತ್ತಿ: ಬ್ರಾಹ್ಮಣನ ಷಟ್ಕರ್ಮಗಳಲ್ಲಿ ನಡುವಿನ ಎರಡು—ಅಧ್ಯಯನ [illegible]ಧ್ಯಾಪನ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ 'ಮೇಷ್ಟ್ರು'.

ಸಾಧನೆ, ಸಿದ್ಧಿ : ಮೊದಲು 'ರತ್ನನ ಪದ', 'ಪುರುಷ ಸರಸ್ವತಿ' ಇಂಥ ಸ್ವಂತ ಕೃತಿ ರಚನೆಮಾಡಿದರೂ; ಬರುತ್ತ ಬರುತ್ತ ಶಿಶುಸಾಹಿತ್ಯ, ಬಾಲಸಾಹಿತ್ಯ, ಹಳಗನ್ನಡ ಕಾವ್ಯಗಳು, ಹೊಸಗನ್ನಡ ಕವಿಗಳು, ಬೌದ್ಧಧರ್ಮ, ಜೈನಧರ್ಮ ಮುಂತಾದುವನ್ನು ಕುರಿತು ಬರೆದು. ಅವುಗಳನ್ನು ಕುರಿತು ಭಾಷಣಮಾಡಿ, ಪ್ರಥಮ ಪಂಕ್ತಿಯ ಪ್ರಚಾರ ಸಾಹಿತಿಯಾಗಿದ್ದಾರೆ.

ಕೆಲವು ಕೃತಿಗಳು—ನಮ್ಮಲ್ಲಿ ದೊರಕುವುವು.

ಕಂಬಳಿಸೇವೆ ★ ಶ್ರೀ ಕವಿರತ್ನ ★ ಚಿಕ್ಕದೇವರಾಜಬಿನ್ನಹ

ಗಂಡುಗೊಡಲಿ ★ ವಿಗಡ ವಿಕ್ರಮಚರಿತ ★ ಬುದ್ಧನ ವರ್ಣವಾದ

ಮಾತಿನ ಮಲ್ಲಿ ★ ಕರಿಯ ಕಂಬಳಿ ★ ಪಂಚರಾತ್ರ ಪ್ರಪಂಚ

ಆನಂದ್ ಬ್ರದರ್ಸ್, ಬೆಂಗಳೂರು-೨.